ಮನ್ಮಥ ಇವರನ್ನು ಕುರಿತು ಕಾವ್ಯ ಪುರಾಣಗಳಲ್ಲಿದ್ದ ಕವಿ ಸೂಕ್ತಿಗಳನ್ನು ಪಾಂಡಿತ್ಯ ಪೂರ್ಣವಾಗಿ ಉದಾಹರಿಸಿ ವಿಶ್ಲೇಷಿಸಿದ್ದಾರೆ. ಇಲ್ಲಿ ವಾಚ್ಯಾರ್ಥವೇ ಪ್ರಮುಖ ವಾಗಿದ್ದುದರಿಂದ ಧ್ವನ್ಯರ್ಥಗಳಿಗೆ, ಆಳವಾದ ಚಿಂತನೆಗಳಿಗೆ ಆಸ್ಪದ ಸಿಕ್ಕಿಲ್ಲ ವೆನ್ನಿಸುತ್ತದೆ.

'ಮಳೆ' ನಿಜಕ್ಕೂ ಕುತೂಹಲವನ್ನು ಕೆರಳಿಸುತ್ತ ಓದಿಸಿಕೊಳ್ಳುವ ಶ್ರೇಷ್ಠ ಪ್ರಬಂಧ. ಎಲ್ಲರ ಅನುಭವಕ್ಕೂ ಬರುವ ಮಳೆಯ ಪ್ರಕಾರಗಳನ್ನು ಲೇಖಕರು ಪ್ರಾರಂಭದಲ್ಲಿ ಹೇಳುತ್ತ, ಅದರಿಂದಾಗುವ ಲಾಭ-ಹಾನಿ ಹಾಗೂ ತೊಂದರೆಗಳನ್ನು ಸ್ವಾರಸ್ಯಪೂರ್ಣವಾಗಿ ಲೆಕ್ಕ ಹಾಕಿದ್ದಾರೆ. ತುಂತುರು ಮಳೆ ಒಂಟಿ ಕಣ್ಣಲ್ಲಿ ಅಳುವ ಹಾಗೆ ಕಂಡರೆ, ಜಿಟ ಜಿಟಿ ಮಳೆ ದಾರಿಹೋಕರಿಗೆ ಕಿಟಿ ಕಿಟಿ ಕೊಟ್ಟು ಅವರ ಬಟ್ಟೆ ಗಳಿಗೆ ಕೆಸರಿನ ಪೇಂಟ್ ಮಾಡುವಂಥದೆನ್ನುವರು. ಇಂಥ ಮಳೆ ಹತ್ತಿದಾಗ ಪಾದ ಚಾರಿಗಳ ಗೋಳು, ಅವರ ಆಕಾರ ಹೇಳತೀರದಂಥದು. ಕಾರು ಇದ್ದವರೇ ಕಾನೂನು ಮಾಡ್ತಾರೆ, ಬಡವರನ್ನು ಯಾರು ಕೇಳ್ತಾರೆ ? ಎಂಬ ಪ್ರಶ್ನೆ ಧ್ವನಿ ಪೂರ್ಣವೂ ಚಿಂತನಾರ್ಹವೂ ಆಗಿದೆ, ಅಷ್ಟೇ ಅಲ್ಲ. ಇಂದಿಗೂ ಇದು ಪ್ರಶ್ನೆ ಯಾಗಿಯೇ ಉಳಿದಿದೆ. ಮಳೆಯಿಂದಾಗುವ ಲಾಭಗಳನ್ನು ಸ್ವಾರಸ್ಯಮಯವಾಗಿ ಬಣ್ಣಿಸುತ್ತ ಮನೆಯಲ್ಲಿ ಬೆಚ್ಚಗೆ ಕೂತು ಹೆಣ್ಣು ಮಕ್ಕಳನ್ನು ರಮಿಸಿ ವಿಧವಿಧದ ತಿಂಡಿಗಳನ್ನು ಮಾಡಿಸಿಕೊಂಡು ತಿನ್ನಬಹುದೆನ್ನವರು. "ಮಳೆಯನ್ನು ವರ್ಣಿಸುವು ದೆಂದರೆ ವಿಶ್ವವನ್ನೇ ವಿವರಿಸಿದಂತೆ, ಈ ಕೆಲಸ ಆದೀತೆ ? ಮುಗಿದೀತೆ ? ಒಬ್ಬರ ಕೆಳಿಗೈ ಇನ್ನೊಬ್ಬರ ಮಿದುಗೈಯನ್ನು ಪ್ರೀತಿಯಿಂದ ಬಯಸುವ ಸಮಯ ಅದು"[1] ಎಂದು ತಮ್ಮ ರಸಿಕತೆಯನ್ನು ಹೊಮ್ಮಿಸಿದ್ದಾರೆ.

'ಹೆಣ್ಣು' ಪ್ರಬಂಧದಲ್ಲಿ ಹೆಣ್ಣಿಗೆ ಸಿಗುವ ಮರ್ಯಾದೆ ಮಹತ್ವವನ್ನು ಕೊಂಡಾ ಡುತ್ತಾ, ಪಾಶ್ಚಾತ್ಯ ಪೌರ್ವಾತ್ಯ ಪ್ರೇಮಮೀಮಾಂಸೆ, ಭಾರತೀಯ ದಂಪತಿಗಳ ಪ್ರೇಮ ಸ್ವರೂಪವನ್ನು ನಿರೂಪಿಸಿದ್ದಾರೆ. ಹೆಣ್ಣಿಗೆ ಮದುವೆಯಂಥ ಸಂಸ್ಕಾರದಿಂದಲೇ ಸಮಾಜದಲ್ಲಿ ಸ್ಥಾನಮಾನ ಸಿಗುವುದೆಂದು ತಮ್ಮ ಕಾಲದ ಭಾವನೆ ಮತ್ತು ತಮ್ಮ ಸ್ವಾನುಭವವನ್ನು ವ್ಯಕ್ತಪಡಿಸಿದ್ದಾರೆ. ಹೆಣ್ಣು ಅಬಲೆಯೆಂದು ಆಕೆಯ ಅಸಹಾಯ ಕತೆಯನ್ನು ಒಂದೆಡೆ ಹೇಳಿದರೆ, ಮರುಕ್ಷಣದಲ್ಲೇ ವ್ಯಂಗ್ಯವಾಗಿ ಆಕೆ ಹೇಗೆ ಅಬಲೆ ಯಾಗುತ್ತಾಳೆ ಎನ್ನುತ್ತ, ಗಂಡಸನ್ನು ಸ್ತ್ರೀ ಹೇಗೆ ತನ್ನ ಸೌಂದರ್ಯದಿಂದ ಕುಣಿಸು ತ್ತಾಳೆ, ಹೇಸರ ಕತ್ತೆಯಂತೆ ದುಡಿಸುತ್ತಾಳೆ ಎಂದು ನುಡಿದು ಓದುಗರು ಆಕೆಯ ಬಗ್ಗೆ ಯೋಚಿಸುವಂತೆ ಮಾಡುವರು. ಇಲ್ಲಿ ಹೆಣ್ಣಿನ ಬಗೆಗಿದ್ದ ಲೇಖಕರ ಅಭಿಪ್ರಾಯ

---

1. ವಿ. ಸೀ. : ಲಲಿತ ಪ್ರಬಂಧ ಸಂಪುಟ 'ಮಳೆ' ಪುಟ-91.

ಅವರ ಸ್ವಾನುಭವ ಮತ್ತು ಲೋಕಾನುಭವದಿಂದ ರೂಪ ಪಡೆದಂಥವು ಎಂಬುದು ಸ್ಪಷ್ಟವಾಗುವುದು.

'ದೋಸೆ' ಪ್ರಬಂಧದಲ್ಲಿ, ದೋಸೆಗಳಲ್ಲಿನ ಪ್ರಕಾರಗಳನ್ನು ಹೆಸರಿಸುತ್ತ, ಚೆನ್ನಾಗಿ ದೋಸೆ ಮಾಡಲು ಬಂದರೆ ಸಾಕು, ಅಂಥವರು ಬಿ.ಎ., ಎಂ.ಎ., ಡಿಗ್ರಿ ಪಡೆದವರಿಗಿಂತ ಮಿಗಿಲು ಎಂದಿದ್ದಾರೆ. ದೋಸೆ ಎಷ್ಟೊಂದು ರುಚಿಯಾದುದು ಮೋಹಕವಾದುದು, ಅದನ್ನು ಮಾಡುವ ಸದ್ದು ಕೇಳಿಸಿಕೊಂಡವರ ಮೈಮನಗಳು ಹೇಗೆ ಪುಳಕಗೊಳ್ಳುವವು ಎಂಬುದನ್ನಿಲ್ಲಿ ವರ್ಣಿಸಿದ್ದು ತೀರಾ ಆಕರ್ಷಕವಾಗಿದೆ. "ದೂರದ ಅಡಿಗೆಮನೆಯಿಂದ ಚೊಂಯ್ ಎಂಬ ಶಬ್ದ ಕೇಳಿದೊಡನೆಯೇ ಬೈಠಕ್ ಖಾನೆಯಲ್ಲಿ ಕಕ್ಷಿಗಾರರ ನಡುವೆ ಕುಳಿತು ಫೀಜು ಕೇಳುತ್ತಿರುವ ಕಿವಿಗೂ ಮೂಗಿಗೂ ಅದರ ಸಂಬಂಧವೇರ್ಪಡುತ್ತದೆ. ಎರಡೂ ಅರಳುತ್ತವೆ. ಒಳಗೆ ಅರಿಯದಂತೆಯೇ ಆಹ್ಲಾದವುದಿಸುವುದು. ದುರ್ದಮ್ಯವಾದ ಪುಳಕ ಬರುವುದು. ಎಲ್ಲ ಸಂತೋಷಗಳ ಅನುಭವದಲ್ಲಿನಂತೆಯೇ ರಕ್ತದ ವೇಗ ಹೆಚ್ಚುವುದು, ಸುತ್ತಲಿನವರ ಗಮನಕ್ಕೆ ಬೀಳದೆ ಬಾಯಲ್ಲಿ ಲಾಲಾಜಲ ಆಡುವುದು, ತಿಳಿಯಾಗುವುದು".[1]

ಶಿಸ್ತು ಜೀವನದ ಪ್ರತಿಯೊಂದು ಹಂತದಲ್ಲೂ ಬೇಕೆಂದು 'ಶಿಸ್ತು' ಪ್ರಬಂಧದಲ್ಲಿ ಸೂಚಿಸಿದರೆ, 'ಯಾವಾಗಲೂ ಓದೇನೇ ?' ಪ್ರಬಂಧದಲ್ಲಿ, ಓದು ಒಂದು ಹಂತದ ವರೆಗೆ ಬೇಕು, ಆದರೆ ಯಾವತ್ತೂ ಆದರಲ್ಲೇ ಮುಳುಗುವುದು ಉಚಿತವಲ್ಲ, ಓದಿಗಿಂತ ಲೋಕಾನುಭವ ಶ್ರೇಷ್ಠವೆಂದಿದ್ದಾರೆ. 'ಪತ್ರದೂತ'ದಲ್ಲಿ ತವರಿನಲ್ಲಿದ್ದ ಹೆಂಡತಿಯ ಪತ್ರದ ನಿರೀಕ್ಷೆ ಮಾಡಿ ಮಾಡಿ ಬೇಸತ್ತುದರ ವರ್ಣನೆ ಎರಡು ಮೂರು ಪುಟಗಳಷ್ಟು ಬಂದಿದೆ. ಅವಳಿಂದ ಪತ್ರ ಬಾರದಿರಲು ಕಾರಣಗಳೇನಿರಬಹುದೆಂದು ಅವುಗಳನ್ನು ಒಂದೊಂದಾಗಿ ಉಲ್ಲೇಖಿಸುತ್ತ ಹೋದುದು ಸ್ವಾರಸ್ಯಪೂರ್ಣವಾಗಿದೆ, ಕುತೂಹಲ ಕೆರಳುವಂತೆ ಪ್ರಬಂಧ ಮುನ್ನಡೆದಿದೆ. ಗಂಡ-ಹೆಂಡತಿಯರಲ್ಲಿನ ಬಿಗುವು ಇಂಥ ಪರದಾಟಕ್ಕೆ ಕಾರಣವೆಂಬ ನಿರ್ಣಯಕ್ಕೆ ಬಂದು, ಇಬ್ಬರೂ ಸ್ವಲ್ಪ ಸ್ವಲ್ಪ ಸೋಲ ಬೇಕೆನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ, ನಿಜಕ್ಕೂ ಈ ಪ್ರಬಂಧ ನವದಂಪತಿ ಗಳಿಗೆ ಜೀವನ ಪಾಠವಾಗಿದೆ.

'ನನ್ನ ಜೀವನ ದರ್ಶನ' ಭಿನ್ನ ರೀತಿಯ ವಿಚಾರ ಪ್ರಧಾನ ಪ್ರಬಂಧ. ತಮ್ಮ ಬಾಳಿನಲ್ಲಿ ನಂಬಿರುವ ಧ್ಯೇಯಾದರ್ಶಗಳನ್ನು ಲೇಖಕರು ಇಲ್ಲಿ ವ್ಯಕ್ತಪಡಿಸುತ್ತ, ತಮ್ಮ ಜೀವನದ ನಿಲುವನ್ನು ಪ್ರಕಟಿಸಲು ಯತ್ನಿಸಿದ್ದಾರೆ. ಪ್ರತಿಯೊಬ್ಬರಿಗೂ ತಮ್ಮವೇ ಆದ ವಿಚಾರ, ನಂಬಿಕೆ, ಆದರ್ಶಗಳು ಇರುವ ಹಾಗೆ ಲೇಖಕರಿಗೂ ಇವೆ. ಅವರು ತಾವು

---

1. ವಿ. ಸೀ. : ಲಲಿತ ಪ್ರಬಂಧ ಸಂಪುಟ 'ದೋಸೆ' ಪುಟ-118.

ನಂಬಿಕೊಂಡು ಬಂದವುಗಳ ಬಗ್ಗೆ ಅಭಿಮಾನಪಟ್ಟುಕೊಂಡಿದ್ದಾರೆ. ಒಟ್ಟಿನಲ್ಲಿ, ಒಳ್ಳೆಯ ಅಂಶಗಳನ್ನು ಸ್ವೀಕರಿಸಬೇಕೆನ್ನುವ ಅವರ ಸ್ವಾನುಭವವಿಲ್ಲಿ ಪ್ರಕಟಗೊಂಡಿದೆ.

'ಸೀಕರಣೆ' ಯಲ್ಲಿನ ಪ್ರಬಂಧಗಳು ಮೇಲಿನವುಗಳಿಗಿಂತ ಭಿನ್ನಸ್ವರೂಪದವು. ಇದರಲ್ಲಿನ 'ಹೆಣ್ಣು' 'ಸಾವು' ವರ್ಣನ ಪರ ಪ್ರಬಂಧಗಳಾಗಿದ್ದು, ಅಂಥ ಒಳನೋಟಗಳನ್ನಾಗಲೀ, ಕಾವ್ಯ ಧ್ವನಿಯನ್ನಾಗಲೀ, ಪ್ರತೀಕ ಪ್ರತಿಮೆಗಳನ್ನಾಗಲೀ ಒಳಗೊಂಡಿಲ್ಲ. ಬಹುಶಃ ಇಂಥ ಪ್ರಬಂಧಗಳನ್ನು ಸಹೃದಯರು ಹೇಗೆ ಸ್ವೀಕರಿಸುವರೋ ಏನೋ ಎಂದು ಸಂಶಯಪಟ್ಟು ಸ್ವತಃ ವಿ. ಸೀ. ಯವರೇ ಈ ಸಂಕಲನದ ಮುನ್ನುಡಿಯಲ್ಲಿ "ನಾನು ಹಳೆಯ ಕಾಲದ ಮನುಷ್ಯ, ಈ ಕಾಲದ ಯಾವ ಹೊಸ ಪ್ರಜ್ಞೆಗಳೂ ವಿವೇಕವೂ, ಬೆಳೆಯಲಿಲ್ಲವಾಗಿ ಅವನ್ನು ಮೆರೆಸುವ ಶಕ್ತಿ ಅವಕಾಶವಿಲ್ಲ"[1] ಎಂದಿದ್ದಾರೆ, ಅವರು ಹೀಗೆ ಹೇಳಿಕೊಳ್ಳುವ ಅಗತ್ಯವೇ ಇರಲಿಲ್ಲವೆನ್ನಿಸುತ್ತದೆ. ಏಕೆಂದರೆ ಅವರು ಹಳೆಯ ಕಾಲದವರಾಗಿದ್ದ ಮಾತ್ರಕ್ಕೆ ಅವರ ಸಾಹಿತ್ಯವೆಲ್ಲ ಹಳೆಯದಾಗದು, ಹೊಸಬರಾದ ಮಾತ್ರಕ್ಕೆ ಅವರ ಸಾಹಿತ್ಯವೆಲ್ಲ ಶ್ರೇಷ್ಠವಾಗದು, ಸತ್ವಯುತ ಸಾಹಿತ್ಯ ಯಾವ ಕಾಲದ್ದೇ ಆಗಿದ್ದರೂ ಅದೆಂದಿಗೂ ಹಳೆಯದಾಗದು, ಔಟ್ ಡೇಟ್ ಆಗದು. ಅದು ಕಾಲಕಾಲಕ್ಕೆ ಹೊಸ ಹೊಸ ಅರ್ಥಗಳನ್ನು ಸ್ಫುರಿಸುತ್ತ ನಿತ್ಯ ನೂತನವಾಗಿ ಪರಿಣಮಿಸುವುದು. ಅವರ 'ಕೋಳಿ' 'ಮಣ್ಣು' 'ಹೆಣ್ಣು' 'ನಿಂಬೆ' 'ಮಾವು' ನಿಜಕ್ಕೂ ಇವು ಒಳಗೊಂಡ ವಿಷಯಗಳಿಂದ ಸತ್ವಪೂರ್ಣವಾಗಿವೆ. "ನಮ್ಮ ಅಜ್ಜಿಯ ಅಡಿಗೆ" ಯಂತೂ ಕನ್ನಡದ ಅತ್ಯುತ್ತಮ ಲಲಿತ ಪ್ರಬಂಧಗಳಲ್ಲೊಂದಾಗಿದೆ. ಅಜ್ಜಿ ಮಾಡಿದ ಅಡಿಗೆಯ ಬಗ್ಗೆ, ಆಕೆಯ ಜೀವನೋತ್ಸಾಹದ ಬಗ್ಗೆ, ಆಕೆಯ ರುಚಿ ಅಭಿರುಚಿಯ ಬಗ್ಗೆ ಅನನ್ಯವಾಗಿ ಹೃದಯತುಂಬಿ ಬಣ್ಣಿಸಿದ್ದಾರೆ. ಈ ಸಾಲುಗಳಲ್ಲಿ "ಆಮ್ಲೆಟ್ ಕಟ್ಲೆಟುಗಳ ಕೋಚು ವಾಸನೆಗೆ ಮೂಗನ್ನು ತಿದ್ದಿದ 'ಗಂ' ಎಂದು ಆ ಕಾಲದ ಆ ದೂರದಿಂದ ಕರೆನಾಡಲ್ಲಿ ಕುಳಿತ ಇಲ್ಲಿಗೆ ಆಕೆ ಅಡುತ್ತಿದ್ದ ಆ ಜೀರಿಗೆ ಕೊತ್ತಂಬರಿಗಳ ಹಸವಾಸನೆ ತೇಲಿ ತೇಲಿ ಹಾಯಿಸಿಸಿ ಅತ್ತರಿನಂತೆ ಬರುತ್ತದೆ".[2] ಅಜ್ಜಿಯ ಅಡಿಗೆಯ ನೆಪದಲ್ಲಿ ಅವರು ಜೀವನವನ್ನು ಪೋಷಿಸುವ ತತ್ವವನ್ನು ಕುರಿತು ಪ್ರೀತಿ ವ್ಯಕ್ತಪಡಿಸಿದ್ದಾರೆನ್ನಿಸುತ್ತದೆ. ಸಂಸ್ಕೃತಿ ಮತ್ತು ಕಲೆ ಕೇವಲ ಸಾಹಿತ್ಯದಲ್ಲಿ ಇಲ್ಲ. ದಿನ ನಿತ್ಯದ ಇರುವಿಕೆಯಲ್ಲೂ ಇರಬಲ್ಲುದು ಎಂಬುದಕ್ಕೆ ಇಲ್ಲಿಯ ಅಜ್ಜಿಯೇ ಸಾಕ್ಷಿ. "ಆಕೆ ನಡೆದಾಡಿದಾಗ ಬೀಗಲ್ಲದ, ಸಡಿಲಲ್ಲದ, ಕೆಡೆತವಲ್ಲದ, ಅತಿ ಧಾರಾಳವಲ್ಲದ, ಅಗ್ಗವಲ್ಲದ, ಶ್ರೀಮಂತವಲ್ಲದ ಆ ನಡೆ ನೋಡಲು ಎರಡು ಕಣ್ಣು ಸಾಲದು."[3] ಎಂದು

---

1. ವಿ. ಸೀ. : ಲಲಿತ ಪ್ರಬಂಧ ಸಂಪುಟ, ಪುಟ-329.
2. ವಿ. ಸೀ. : ಲಲಿತ ಪ್ರಬಂಧ ಸಂಪುಟ, 'ನಮ್ಮ ಅಜ್ಜಿಯ ಅಡುಗೆ,' ಪುಟ-310.
3. ವಿ. ಸೀ. : ಲಲಿತ ಪ್ರಬಂಧ ಸಂಪುಟ, 'ನಮ್ಮ ಅಜ್ಜಿಯ ಅಡುಗೆ,' ಪುಟ-312.

ತಮ್ಮ ಕಣ್ಣಲ್ಲಿ ಆಕೆಯ ಮೂರ್ತಿಯನ್ನು ಕಡೆದಿರಿಸಿಕೊಂಡಿದ್ದಾರೆ, ಅಜ್ಜಿಯ ಪಾತ್ರ ವಿಲ್ಲಿ ಸಾಂಕೇತಿಕವಾದುದು. ಆಕೆಯು ಇಲ್ಲಿ ಸಂಪದ್ಭರಿತ, ಸಂತೃಪ್ತಿಯುತ ಜೀವನಕ್ಕೆ ಸಾಕ್ಷಿಯಾಗಿದ್ದಾಳೆ. ಲೇಖಕರು ತಮ್ಮ ಕಾಲದ ಜೀವನ ವ್ಯಾಪಾರವನ್ನು, ಮಾನವೀಯ ಸಂಬಂಧಗಳನ್ನು ಇಲ್ಲಿ ಚಿತ್ರವತ್ತಾಗಿ ಬಿಡಿಸಿದ್ದಾರೆನ್ನಿಸುತ್ತದೆ. ಇಲ್ಲಿ ತಮ್ಮ ಜೀವನದ ಸಾರ್ಥಕತೆಯನ್ನೂ ಅನುಭವಿಸಿದ್ದಾರೆನ್ನಿಸುತ್ತದೆ.

'ಕೋಳಿ' ಪ್ರಬಂಧದಲ್ಲಿ ಅವರ ಲೋಕಾನುಭವ ಹೆಪ್ಪುಗಟ್ಟಿದೆ. ಬ್ರಾಹ್ಮಣ ಕೋಳಿ ಬಗ್ಗೆ ಏನು ಬರೀತಾನೆ ಎಂದುಕೊಂಡಿದ್ದೀರಲ್ಲವೆ ? ಎನ್ನುತ್ತ ಪ್ರಬಂಧವನ್ನು ಪ್ರಾರಂಭಿಸಿದರು. ಕೋಳಿಗಳಿಗೆ ಅವರು ಹಕ್ಕಿ ಜೀವ ಜಂತುಗಳೆನ್ನದೆ ಪ್ರಾಣಿಗಳೆಂದಿದ್ದಾರೆ. ಏಕೆಂದರೆ ಅವುಗಳ ಪ್ರಾಣ ನಮ್ಮ ಕೈಯಲ್ಲಿದೆಯೆಂದೂ, ಕೊಲ್ಲುವ ವರೆಗೆ ಅವು ಪ್ರಾಣಿಗಳೇ ಎಂದು ಸ್ವಾರಸ್ಯಮಯವಾಗಿ ವ್ಯಾಖ್ಯಾನಿಸಿದ್ದಾರೆ. ಜನ್ನನ ಯಶೋಧರ ಚರಿತೆಯಲ್ಲಿನ ಹಿಟ್ಟಿನ ಹುಂಜ, ಚಿನ್ನದ ತತ್ತಿ ಇಡುವ ಕೋಳಿ ಇಂಥ ಕೆಲವು ಕಥೆಗಳನ್ನು ಉದಾಹರಿಸಿ ಪ್ರಬಂಧದ ವಿಷಯವನ್ನು ಪುಷ್ಟೀಕರಿಸಿದ್ದಾರೆ. 'ಹೆನ್ನ-ಪೆಕಡ್' ದ ಬಗ್ಗೆಯೂ ಇಲ್ಲಿ ಪ್ರಸ್ತಾಪಿಸಿದ್ದಾರೆ. ಕೋಳಿಯಿಂದ ಹುಂಜ ಕುಕ್ಕಿಸಿಕೊಳ್ಳುವಂತೆ ಹೆಂಡತಿಯಿಂದ ಯಾವ ಗಂಡು ಇಕ್ಕಿಸಿಕೊಂಡು ಕೆಲಸ ಮಾಡುವನೋ ಬಹುಶಃ ಇಂಥವನಿಗೆ ಜನ 'ಹೆನ್-ಪೆಕಡ್' ಹಜಬಂಡ್ ಎಂದು ಕರೆಯತೊಡಗಿದಂತಿದೆ, ಎನ್ನುವರು.

'ನಿಂಬೆ' ಪ್ರಂಬಂಧದಲ್ಲಿ ಅದರ ಪ್ರಯೋಜನಗಳನ್ನು ವರ್ಣಿಸುತ್ತ, ಅದರ ರುಚಿ ಮತ್ತಾವುದಕ್ಕೂ ಇಲ್ಲವೆಂದು ಅದರ ಬಗ್ಗೆ ಅತೀವ ಮೋಹ ವ್ಯಕ್ತಪಡಿಸಿದ್ದಾರೆ. "ಹಿಂಡಿದರೆ ರಸವೆಲ್ಲ ಇಳಿದು ತೊಗಟೆ ಕುಲಾವಿಯಾಗಿ ಮೊಗಚಿ ಬೀಳುವುದು ನಿಂಬೆ ಒಂದರಲ್ಲಿಯೇ. ಆ ಬಣ್ಣ ! ಆ ರಸ ! ಸೃಷ್ಟಿಯಲ್ಲಿ ಅದಕ್ಕೆ ಸಮನಾಗುವಷ್ಟು ಇನ್ನೊಂದಾಗಿಲ್ಲ. ನಿಂಬೆಯನ್ನು ಲಿಂಬೆಯೆಂದು ಗ್ರಾಮ್ಯರು ಕುಲಗೆಡಿಸುತ್ತಾರೆ. ಉಚ್ಚಾರಶಕ್ತಿ ಊನವಾಗಿರುವವರು, ದಿನಕ್ಕೆ ನಾಲ್ಕು ತೊಲೆ ನಸ್ಯ ಸೇದಿಕೊಳ್ಳುವವರು, ಬಾಯಿಂದ ನುಡಿಯ ಬಲ್ಲರೆ ಇದನ್ನು ? ನಾಲಗೆ ತಿರುಗಬೇಕಲ್ಲ ; ಅಂಥವರೂ ಚೆನ್ನಾಗಿ ಹಣ್ಣಾದ ಹೊನ್ನಿಂಬೆ ಹಣ್ಣನ್ನು ಒಮ್ಮೆ ನಾಲಗೆಗೆ ಸುಳಿದರೆ 'ಲ' ತಿರುಗಿ ಮರಳಿ 'ನ' ಆದೀತೆಂದು ನನ್ನ ಭಾವನೆ. ಭಾಷಾ ಶಾಸ್ತ್ರ ಏನನ್ನುತ್ತೋ ಕಾಣೆ. ಶಾಸ್ತ್ರಗಳನ್ನು ಕಟ್ಟಿಕೊಂಡು ನನಗೇನು ?"[1] ಎಂದು ವ್ಯಂಗ್ಯಭರಿತ ಹಾಸ್ಯಮಯ ಶೈಲಿಯಲ್ಲಿ ವರ್ಣಿಸುತ್ತ ನಿಂಬೆಯ ಸುತ್ತ ಮುತ್ತ ತಮ್ಮ ಸ್ವಾನುಭವಗಳನ್ನು ವಿಚಾರಗಳನ್ನು ಹರಿಯಬಿಟ್ಟಿದ್ದಾರೆ.

---

1. ವಿ. ಸೀ. : ಲಲಿತ ಪ್ರಬಂಧ ಸಂಪುಟ 'ನಿಂಬೆ' ಪುಟ-195.

'ಮಾವು' ಪ್ರಬಂಧದಲ್ಲಿ, ಮಾವಿನ ಹಣ್ಣಿನ ವಿಧ ವಿಧದ ಹೊಸ ರುಚಿಗಳನ್ನು ನಾಲಗೆಗೆ ನೀರೂರುವಂತೆ ಅತ್ಯಂತ ರುಚಿಯಾಗಿ ವರ್ಣಿಸಿದ್ದಾರೆ. ಮಾವಿನ ಹಣ್ಣಿನಂಥ ಗಲ್ಲವುಳ್ಳ ಮದ್ರಾಸಿ ಹೆಣ್ಣೊಬ್ಬಳ ಪ್ರಸಂಗವನ್ನಿಲ್ಲಿ ಸ್ವಾರಸ್ಯಮಯವಾಗಿ ಹಿಡಿದಿಟ್ಟಿದ್ದಾರೆ. ಇಂಥ ಹೆಣ್ಣನ್ನು ಕಂಡು ಛೇಡಿಸುತ್ತ ನಡೆದ ಬೀದಿ ಕಾಮಣ್ಣರಿಬ್ಬರು ತಂತಮ್ಮಲ್ಲಿ "ಈಕೆಯ ಮುಖ ಚುಂಬನಕ್ಕೆ ಎಷ್ಟೊಂದು ಪ್ರಶಸ್ತವಾಗಿದೆಯಲ್ಲ," ಎಂದು ಮಾತಾಡಿಕೊಳ್ಳುತ್ತಿದ್ದರು. ಇದನ್ನು ಕೇಳಿಸಿಕೊಂಡ ಲೇಖಕರು ರೇಗಿ "ಬಾಯಿ ಮುಚ್ಚಿರಿ. ನಿಮ್ಮಿಬ್ಬರ ಮುಖವೆಲ್ಲ ಸೇರಿದರೂ ಅದರ ಒಂದು ಪಾಲು ಸಿಕ್ಕದು," ಎಂದು ಮಾರ್ಮಿಕವಾಗಿ ಚುಚ್ಚಿ ನುಡಿದಾಗ, ಅವರು ನಿರುತ್ತರರಾದರು. ಅಷ್ಟೇ ಅಲ್ಲ, ತಮ್ಮ ಅವಿವೇಕತನಕ್ಕೆ ತಲೆ ತಗ್ಗಿಸಿ ಓಡಿ ಹೋದರು. ಇಂಥ ಪ್ರಸಂಗಗಳನ್ನು ಉಲ್ಲೇಖಿಸುತ್ತ ಪ್ರಬಂಧವನ್ನು ಆಕರ್ಷಕವಾಗಿಸಲು ಯತ್ನಿಸಿದ್ದಾರೆ.

'ಹಂಪೆಯಾತ್ರೆ' 1928ರಲ್ಲಿಯೇ ಪ್ರಕಟಗೊಂಡ ಪ್ರವಾಸ ಕಥನ. ಈ ತರದ ಬರಹ ಕನ್ನಡದಲ್ಲಿಯೇ ಮೊತ್ತಮೊದಲನೆಯದು, ಲಲಿತ ಪ್ರಬಂಧದ ಲಕ್ಷಣಗಳನ್ನೇ ಒಳಗೊಂಡ ಈ ಬರವಣಿಗೆ ಇಂದಿಗೂ ತನ್ನ ಆಕರ್ಷಣೆಯನ್ನು ಉಳಿಸಿಕೊಂಡಿದೆ. ಶ್ರೇಷ್ಠ ಗದ್ಯದ ಮಾದರಿಗೆ ಈ ಬರಹ ಸಾಕ್ಷಿಯಾಗಿದೆ. ವಿ. ಸೀ. ಅವರು 1925ರಲ್ಲಿ ನಡೆದ ಬೆಳಗಾವಿ ಸಾಹಿತ್ಯ ಸಮ್ಮೇಳನವನ್ನು ಮುಗಿಸಿಕೊಂಡು ಟಿ. ಎಸ್. ವೆಂಕಣಯ್ಯ, ಬೆಳ್ಳಾವೆ ವೆಂಕಟ ನಾರಣಪ್ಪ, ಡಿ.ವಿ.ಜಿ. ಮತ್ತು ಎಂ. ಆರ್. ಶ್ರೀನಿವಾಸಮೂರ್ತಿ ಅವರೊಂದಿಗೆ ಮರಳಿ ಬರುವಾಗ ಐತಿಹಾಸಿಕ ಕ್ಷೇತ್ರ ಹಂಪೆಯನ್ನು ನೋಡಲು ಹೋಗುವರು. ಅಂದಿನ ರಾತ್ರಿ ವಿರೂಪಾಕ್ಷ ದೇವಾಲಯದಲ್ಲಿ ಉಳಿದು ಮರುದಿನ ವಿದ್ಯಾರಣ್ಯ ಮಂಟಪ, ಕೋದಂಡರಾಮಸ್ವಾಮಿ ದೇವಾಲಯ, ವಿಜಯ ವಿಠ್ಠಲ ದೇವಾಲಯ, ಹಂಪಾಸರೋವರ, ಕಿಷ್ಕಿಂಧೆ, ವಾಲಿಯ ಭಂಡಾರ, ಮಾನೋಮಿ ದಿಬ್ಬ ಮುಂತಾದುವನ್ನು ನೋಡುವರು. ಈ ಸ್ಥಳಗಳನ್ನು ನೋಡಿದುದರ ವಿವರ ಆತ್ಮೀಯ ಶೈಲಿಯಲ್ಲಿ ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ್ದಾರೆ. ಹಂಪಾ ಕ್ಷೇತ್ರದ ನೋಟ ಇಲ್ಲಿ ಕೇವಲ ಪರಿಚಯವಾಗಿರದೆ ಅದರ ಐತಿಹಾಸಿಕ ಮಹತ್ವದ ಎಳೆ ಎಳೆಗಳನ್ನು ಬಿಡಿಸಿವೆ. ಓದುಗನಿಗೆ ಆ ಕ್ಷೇತ್ರದ ಪರಿಚಯದೊಂದಿಗೆ ಚಿಂತನೆಗೆ ತೊಡಗಿಸುತ್ತದೆ. ಗ್ರಂಥದುದ್ದಕ್ಕೂ ಹಾಳು ಹಂಪೆಯ ಸ್ಮೃತಿಗಳು ಹಾಗೂ ಈ ಸುಸಂಸ್ಕೃತ ಪ್ರವಾಸಿಗರ ಸಾಹಿತ್ಯ ಪ್ರಜ್ಞೆ, ಇವುಗಳ ನಡುವೆ ಸಂವಾದ ನಡೆಯುತ್ತದೆ.

ಈ ಎಲ್ಲ ಸ್ಥಳಗಳನ್ನು ನೋಡಿ ಬಂದ ರಾತ್ರಿ ಅವರಿಗೆ ಕನಸು ಬೀಳುವುದು. ಕನಸಿನಲ್ಲಿ ಗತ ಇತಿಹಾಸದ ಸ್ಮೃತಿಗಳು ಒಂದರ ಮೇಲೊಂದು ಕಾಣಿಸ ತೊಡಗುವುವು. ಶ್ರೀ ಕೃಷ್ಣದೇವರಾಯ, ಆತನ ರಾಣಿಯರು, ರಾಜ ವೈಭವ ಜನರ ಸುಖ ಸುಪ್ಪತ್ತಿಗೆಯ ಜೀವನ, ಮುಸ್ಲಿಂರ ದಾಳಿ, ವಿಜಯನಗರ ಸಾಮ್ರಾಜ್ಯದ ಪತನ ; ಆಗ

ಅವರು ಎಚ್ಚರಗೊಂಡು ಕೂಗಿಕೊಳ್ಳುವರು. ಅವರ ಭಾವುಕ ಮನಸ್ಸಿನ ಬರವಣಿಗೆ ಹಾಗೂ ತಿಳಿಹಾಸ್ಯದ ಹೊನಲು ಗ್ರಂಥದುದ್ದಕ್ಕೂ ಹರಿದು ಓದುಗರ ಗಮನವನ್ನು ಸೆಳೆಯುವಲ್ಲಿ ಯಶಸ್ವಿಯಾಗಿದೆ.

ಗ್ರಂಥಾರಂಭದಲ್ಲಿಯೇ ಅವರು "ಹಂಪೆ ಪುಣ್ಯಕ್ಷೇತ್ರ. ಇಂಥ ಪುಣ್ಯಕ್ಷೇತ್ರದಲ್ಲಿ ಇಷ್ಟು ಚೇಳು, ಮೊಂಡರಕಪ್ಪೆ, ಗೇಣುದ್ದ ಚೇಳುಗಳೇ ? ಈ ಜನರಿಗೆ ಭಯವಿಲ್ಲವೇನೊ"[1] ಹಂಪೆ ಹಾಳು ಕೊಂಪೆಯಾದುದನ್ನವರು ಇಲ್ಲಿ ಧ್ವನಿಪೂರ್ಣವಾಗಿ ಹೇಳಿರುವಂತಿದೆ. ವೆಂಕಟನಾರಣಪ್ಪನವರ ಕಟ್ಟುನಿಟ್ಟು, ಡಿ.ವಿ.ಜಿ. ಅವರ ಸ್ವತಂತ್ರ ಮನೋಭಾವ, ಕೊಳಗದಪ್ಪಲೆ ಕಾಫಿ ಕುಡಿಯುವುದು, ಸುರಿವ ಮಳೆಯಲ್ಲಿ ಚಪ್ಪಲಿ ಕೈಕೊಟ್ಟುದು, ಇವೆಲ್ಲ ಸ್ವಾರಸ್ಯಯುತ ಸನ್ನಿವೇಶಗಳಾಗಿ ವರ್ಣನೆಗೊಂಡಿವೆ. ಇವು ಸಾಮಾನ್ಯವೆನ್ನಿಸಿದರೂ ಅಸಾಮಾನ್ಯವಾದ ಅರ್ಥವನ್ನೊಳಗೊಂಡಿವೆ. ಮಳೆಯಿಂದ ರಕ್ಷಿಸಿಕೊಳ್ಳಲು ಅವರೆಲ್ಲ ಅಲ್ಲಿಯೇ ಹತ್ತಿರದಲ್ಲಿದ್ದ ಆಲೆಮನೆ ಸೇರಿದಾಗ ಅಲ್ಲಿನ ಜನರ ಚಟುವಟಿಕೆಗಳ ವರ್ಣನೆ ಧ್ವನಿಪೂರ್ಣವಾಗಿದೆ. ಕಾವ್ಯಮಯ ಭಾಷೆ ಉದ್ದಕ್ಕೂ ಹರಿದಿದೆ. "ವಿದ್ಯಾರಣ್ಯರು, ಹುಕ್ಕಬುಕ್ಕರು, ಕೃಷ್ಣದೇವರಾಯ, ರಾಮರಾಯ ಇಂಥ ಐತಿಹಾಸಿಕ ವ್ಯಕ್ತಿಗಳ ಸತ್ವಸಾಮರ್ಥ್ಯಗಳನ್ನು ಅಣಕಿಸುವಂಥ ಇವರ ಜೀವನ ಸತ್ವವೇನೂ ಸಾಮಾನ್ಯವಲ್ಲ. ಜೀವನ ಇತಿಹಾಸವಾಗುವುದು ಯಾವಾಗ ? ಹೇಗೆ ? ಅದರ ಕಾರಣಗಳೇನಿರಬಹುದೆಂದು ಈ ವರ್ಣನೆ ಮೌನವಾಗಿ ಚಿಂತಿಸುವಂತಿದೆ."[2]

ಪ್ರವಾಸ ಮುಗಿದರೂ ವಿ.ಸೀ. ಹಂಪೆಯ ಕ್ಷೇತ್ರಗಳಲ್ಲಿಯೇ ತನ್ಮಯರಾಗಿ ಬಿಡುವರು. ಅವರ ಮೈ ಮನಗಳಲ್ಲಿ ಆ ಸ್ಥಳ ತುಂಬಿಕೊಳ್ಳುವುದು. ತಿರುಗಿ ಹೊರಡಲೇ ಬೇಕಲ್ಲ ! ಎಲ್ಲ ಮಿತ್ರರು ಚಕ್ಕಡಿ ಗಾಡಿಯಲ್ಲಿ ಕುಳಿತು ಹಂಪೆಯಿಂದ ಹೊರಟರು. ಬರುವಾಗ ಆ ಎಲ್ಲ ನೆನಪುಗಳು ವಿ.ಸೀ. ಅವರನ್ನು ಹೇಗೆ ಕಾಡಿದುವು ಎಂಬುದನ್ನಿಲ್ಲಿ, ಪರಿಣಾಮಕಾರಿಯಾಗಿ ಧ್ವನಿರಮ್ಯವಾಗಿ ಹಿಡಿದಿಟ್ಟಿದ್ದಾರೆ. "ಏರಿನಲ್ಲಿಯೂ ತಗ್ಗಿನಲ್ಲಿಯೂ ಆ ಶಾಂತಿಯ ರುದ್ರಭೂಮಿಯಲ್ಲಿ ಗಾಡಿ ಹೊರಟಿತು. ದೇಹ ಪಂಜರದಲ್ಲಿನ ಕೀಲು ಹಾಡತೊಡಗಿದುವು."[3]

ಗದ್ಯ ಬರವಣಿಗೆಯಲ್ಲಿ ವಿ.ಸೀ. ಅವರದು ಎತ್ತಿದ ಕೈ. ಅವರ ಬರವಣಿಗೆ ಅತ್ಯಂತ ಮೊನಚಾದುದು, ಪರಿಣಾಮಕಾರಿಯಾದುದು, ಹಾಗೂ ಕಾವ್ಯದ

---

1. ವಿ. ಸೀ. : ಲಲಿತ ಪ್ರಬಂಧ ಸಂಪುಟ, ಪಂಪಾಯಾತ್ರೆ ಪುಟ-1.
2. ವಿ. ಸೀ. : ಲಲಿತ ಪ್ರಬಂಧ ಸಂಪುಟ, ಪ್ರಸ್ತಾವನೆ ಪುಟ-18.
3. ವಿ. ಸೀ. : ಲಲಿತ ಪ್ರಬಂಧ ಸಂಪುಟ, ಪಂಪಾಯಾತ್ರೆ ಪುಟ 50.

ನಡೆಯನ್ನು ಹೊಂದಿ ಗಂಭೀರವಾದುದು. ಇಲ್ಲಿ ಅವರ ಕೆಲವು ಗದ್ಯಬರವಣಿಗೆಯ ಮಾದರಿಗಳನ್ನು ಉದಾಹರಿಸಬಹುದು. ಗದ್ಯದ ಪ್ರತಿಮಾತ್ಮಕತೆಗೆ "ಮೈಸೂರು ರುಮಾಲು" ದಲ್ಲಿನ ಈ ಕೆಳಗಿನ ಸಾಲುಗಳನ್ನು ನೋಡಬಹುದು. "ಕಾಲಿಗೆ ಕಾಶಿ ಯಾತ್ರೆಯ ಜೋಡು, ನಿರಿ ಶೀಡಿ ಕಚ್ಚೆತಿದ್ದಿ ಕಾಲು ತುಂಬ ಉಟ್ಟ ಬೆಳ್ಳನೆಯ ಅಂಚಿನ ಪಂಚೆ, ಬೆರಳಿಗೆ ಹರಳಿನ ಉಂಗುರ, ಒಂದು ಕೈಯಲ್ಲಿ ರೇಷ್ಮೆಯ ವಸ್ತ್ರ ನಸ್ಯದ ಡಬ್ಬಿ, ಇನ್ನೊಂದರಲ್ಲಿ ಬೆತ್ತ ಅಥವಾ ಛತ್ರಿ, ತುಂಬು ಕುತ್ತಿಗೆಯ ಅಂಗಿ, ಕಂಕುಳು ದೂರಿ ಭುಜವೇರಿ ಹಿಂದೆ ಮುಂದೆ ಮರ್ಯಾದೆಯಿಂದ ಈಸಾಡುವ ಉತ್ತರೀಯ, ಕಿವಿಯ ಕಡುಕು. ತಿರುವು ಮೀಸೆ, ಹಣೆಗೆ ಅಕ್ಷತೆ, ಕೋರು ರುಮಾಲು ; ದೇವೇಂದ್ರನಿಗೆ ಕಳೆ ಕೊಡಬಲ್ಲವುಗಳು."[1]

ಮಳೆ ಬರುವುದರ ಮುನ್ಸೂಚನೆ 'ಮಳೆ' ಪ್ರಬಂಧದಲ್ಲಿ ಹೀಗೆ ಬಂದಿದೆ. "ಆಕಾಶದಲ್ಲಿ ಮೋಡ ಕಟ್ಟುತ್ತದೆ, ಅದರ ಮುಖ ಕಾದು ಕೆಂಪಾಗುತ್ತದೆ, ದಿನವೂ ಹೆಚ್ಚು ಕಪ್ಪಾಗುತ್ತ ಕೆರಳಿ ಅಬ್ಬರಿಸುತ್ತದೆ. ಗಾಳಿಗಳ ಜೊತೆಗೆ ಕೂಗಿ ಓಡಿ ಉರುಳಿ ಹೊರಳಿ ಲಾಗ ಹಾಕಿ ಮಿಂಚು ಕಾರುವುದು ಕಾರಿದ ಮಿಂಚನ್ನು ಮತ್ತೆ ನುಂಗುತ್ತದೆ. ಇನ್ನೇನು ಬಂದಿತು ಮಳೆ ವಾಸನೆ ಬರುತ್ತದೆ."[2] ಇಲ್ಲಿ ಮಳೆ ಬರುವ ಮುನ್ನ ಸೃಷ್ಟಿಯಲ್ಲಿ ನಡೆವ ಪ್ರಕ್ರಿಯೆ ಸಜೀವವಾಗಿ ವರ್ಣನೆಗೊಂಡಿದೆ. ಗದ್ಯ ಕ್ರಿಯಾತ್ಮಕ ಆಯಾಮ ಪಡೆದು ಸಜೀವವಾಗಿದೆ. ಪಂಪಾಕ್ಷೇತ್ರದಲ್ಲಿನ ರಾತ್ರಿಯ ದೃಶ್ಯಾವಳಿಯೊಂದರ ಚಿತ್ರಣ ಹೀಗೆ ಮೂಡಿದೆ : "ಬೆಕ್ಕಿನ ಹೊಂಗಣ್ಣಿನ ಕಾಂತಿ ರಾತ್ರಿಯ ಕತ್ತಲಲ್ಲಿ ಕೆಂಡದಂತೆ ಉರಿದು ಅದರ ಕ್ರೂರ ಮುಖವನ್ನು, ನಿಮಿರಿ ನಿಂತ ಅದರ ಮೀಸೆಯನ್ನು ಬೆಳಗುವುದು,"[3] ನದಿಯನ್ನು ಸಂಸಾರಕ್ಕೆ ಹೋಲಿಸಿ ವರ್ಣಿಸುವಲ್ಲಿನ ಅವರ ಕಲ್ಪನಾ ರಮ್ಯತೆ ಮೆಚ್ಚುವಂತಿದೆ ಈ ಕೆಳಗಿನ ಸಾಲುಗಳಲ್ಲಿ : "ಎರಡೂ ಕಡೆಯ ಬೆಟ್ಟಗಳಲ್ಲಿ ದಾರಿ ಮಾಡಿಕೊಂಡು ತೆಳ್ಳಗೆ ಬೆಳ್ಳಗೆ ಎಷ್ಟು ಯುಗಗಳಿಂದಲೋ ಅರಸಿಕೊಂಡು ಹೋಗುತ್ತಿರುವ ಮಂದಗಾಮಿನಿ ನದಿ ; ಅದರ ಸಮಕಾಲೀನರಾಗಿ, ಇಲ್ಲವೆ ಇನ್ನೂ ಪುರಾತನರಾಗಿ ಒಂದೇ ವಿಧದ ವೃತ್ತಿ ಪ್ರವೃತ್ತಿ, ಮೋಹ, ದ್ವೇಷ ಅಸೂಯೆ ಮೊದಲಾದ ಮೂಲಸ್ವಭಾವಗಳನ್ನು ವ್ಯಕ್ತಗೊಳಿಸುತ್ತಿರುವ ಜೀವನ ಪ್ರಯಾಣ ಮಾಡುತ್ತಿರುವ ಮನುಷ್ಯರಾದ ನಾವು ನಮ್ಮ ಸ್ವಭಾವ ಅನುಕೂಲ ಉಪಯೋಗಗಳಿಗೆ ತೋರಿದಂತೆ ನಾವೇ ನಿರ್ಮಾಣ ಮಾಡಿಕೊಂಡು ಹತ್ತಾರು ಶತಮಾನಗಳಿಂದ

---

1. ವಿ. ಸೀ. : ಲಲಿತ ಪ್ರಬಂಧ ಸಂಪುಟ, ಮೈಸೂರು ರುಮಾಲು ಪುಟ-65.
2. ವಿ. ಸೀ. : ಲಲಿತ ಪ್ರಬಂಧ ಸಂಪುಟ, ಮಳೆ ಪುಟ-85.
3. ವಿ. ಸೀ. : ಲಲಿತ ಪ್ರಬಂಧ ಸಂಪುಟ, ಪಂಪಾಯಾತ್ರೆ ಪುಟ-37.

ನಡೆಸಿಕೊಂಡು ಬರುತ್ತಿರುವ ಹರಿಗೋಲುಗಳ ಮೇಲೆ ನದಿ ದಾಟುತ್ತಿರುವ ಪದ್ಧತಿ, ಇದೆಲ್ಲವನ್ನು ನೋಡಿ ನದಿ ಸಂಸಾರವಾಹಿನಿಯೆಂದೂ, ನಾವೆಲ್ಲ ಸಣ್ಣ ಸಣ್ಣ ಕೆಲಸಗಳಿಗಾಗಿ ಆ ಕಡೆಯಿಂದ ಈ ಕಡೆಗೆ ಯಾವವೋ ದೋಣಿಗಳ ಸಹಾಯದಿಂದ ಪ್ರತಿ ನಿಮಿಷವೂ ಹಾಯುತ್ತಿರುವೆವೆಂದೂ, ನೇರವಾಗಿ ಸಮುದ್ರದತ್ತ ಹೋಗದೇ ಪ್ರಯಾಣ ಮುಂದೆ ಸಾಗದೆ, ಪ್ರಯಾಣದ ಚಿಂತೆ ಕೂಡ ಇಲ್ಲದೇ ಅಲ್ಲಿ ಇಲ್ಲಿ ಕಾಲ ಕಳೆಯುತ್ತ, ಅನುಕೂಲವಿದ್ದ ಕಡೆ ಮಾತ್ರ ಬಾಗುತ್ತ ಸುಳಿಯುತ್ತಿರುವೆವೆಂದೂ ತೋರಿ ಬಂತು."[1] ಇಲ್ಲಿನ ಜೀವನ ಪ್ರಯಾಣವನ್ನು ನದಿಗೆ ಹೋಲಿಸಿದ್ದು, ಬಾಳಿನ ಅರ್ಥ, ಹುಡುಕಾಟ ಹೋರಾಟ ಅನ್ವೇಷಣೆ ಇವನ್ನೆಲ್ಲ ಧ್ವನಿಪೂರ್ಣವಾಗಿ ಹಿಡಿದಿಟ್ಟಿದ್ದಾರೆ. ಗದ್ಯ ಇಲ್ಲಿ ಉದ್ದಕ್ಕೂ ಎಳೆ ಎಳೆದಂತೆ ಹರಿಗಡಿಯದೆ ಭಾವಪೂರ್ಣವಾಗಿ ಜಿನುಗಿದೆ. ಗದ್ಯದಲ್ಲಿ ಅವರು ಚಿತ್ರಿಸುವ ಪ್ರತಿಮೆ, ಪ್ರತೀಕಗಳು ಮೆಚ್ಚುವಂತಿವೆ.

ಒಟ್ಟಿನಲ್ಲಿ ವಿ. ಸೀ. ಅವರ ಲಲಿತ ಪ್ರಬಂಧಗಳು ಒಳಗೊಂಡ ವೈಶಿಷ್ಟ್ಯಗಳನ್ನು ಈ ರೀತಿ ಸಂಗ್ರಹಿಸಬಹುದು : ಅವರ ಸುಸಂಸ್ಕೃತ ಮನಸ್ಸು ಪ್ರಬಂಧಗಳುದ್ದಕ್ಕೂ ಸ್ವಚ್ಛಂದವಾಗಿ ವಿಹರಿಸಿದೆ. ಅವರು ರಸಿಕರು, ಆದರೆ ಅವರ ರಸಿಕತೆ, ಇಲ್ಲಿ ಹೇಗೆ ಬೇಕೋ ಹಾಗೆ ಕೋಡಿವರಿಯದೆ, ಹಿತ ಮಿತವಾಗಿ ವ್ಯಕ್ತಗೊಂಡಿದೆ. ರಸಿಕತೆ ಪಕ್ವಗೊಂಡುದನ್ನಿಲ್ಲಿ ಕಾಣುವೆವು. ರುಚಿ, ಶುಚಿ, ಬಹುಶ್ರುತತ್ವ, ನಯಗಾರಿಕೆ, ತಿಳಿಹಾಸ್ಯ, ಅಚ್ಚುಕಟ್ಟುತನ, ಸಂಸ್ಕೃತಿ, ಅರಿವಿನ ಸೊಗಸು, ಸ್ವಾನುಭವ ಮತ್ತು ಲೋಕಾನುಭವ, ಶ್ರೇಷ್ಠ ವಾಗ್ಮಿಯ ಮಾತುಗಾರಿಕೆ, ವಿಷಯ ಹರವು, ಕಲ್ಪನಾ ವಿಲಾಸ, ಇವೆಲ್ಲ ಹದವಾಗಿ ಸಮ್ಮಿಳಿತಗೊಂಡುದನ್ನು ಗುರುತಿಸಬಹುದು. ಕಾವ್ಯಾತ್ಮಕ ಧ್ವನಿರಮ್ಯ ಭಾಷೆ ಅವರ ಪ್ರಬಂಧಗಳುದ್ದಕ್ಕೂ ಬಳಕೆಗೊಂಡಿದೆ. ಭಾವಗೀತಗಳ ನಡೆಯನ್ನು ಹೊಂದಿದ ಅವರ ಪ್ರಬಂಧಗಳಲ್ಲಿ ಉಪಮೆ, ರೂಪಕ, ಪ್ರತಿಮೆ, ಪ್ರತೀಕ ವ್ಯಂಗ್ಯ ಹಾಗೂ ವಿಡಂಬನೆ ಹೇರಳವಾಗಿ ಬಳಕೆಗೊಂಡುದನ್ನು ಕಾಣುವೆವು. ತಮ್ಮ ಆತ್ಮವೃತ್ತ, ಜೀವನ ಸಂದೇಶ, ಜೀವನ ಪ್ರೀತಿ, ಪ್ರಗತಿಪರ ವಿಚಾರ ಮುಂತಾದುವನ್ನು ಸಂದರ್ಭಾನುಸಾರ ಪ್ರಬಂಧಗಳಲ್ಲಿ ಬಳಸಿಕೊಂಡಿದ್ದಾರೆ. ಪ್ರಬಂಧಗಳಲ್ಲಿ ಅವರ ವ್ಯಕ್ತಿತ್ವ ಮೂಡಿ ನಿಂತಿದೆ. ಅವರ ವಿದ್ವತ್ತು, ಆಳವಾದ ಲೋಕಾನುಭವಗಳಿಂದಾಗಿ ಅವರ ಲಲಿತ ಪ್ರಬಂಧಗಳು ಇಂದಿಗೂ ತಮ್ಮ ವೈಶಿಷ್ಟ್ಯವನ್ನು, ಮಹತ್ವವನ್ನು ಉಳಿಸಿಕೊಂಡಿವೆಯೆನ್ನಬಹುದು.

---

1. ವಿ. ಸೀ. : ಲಲಿತ ಪ್ರಬಂಧ ಸಂಪುಟ ಸಂಸಾರಯಾತ್ರೆ ಪುಟ-23-24.

## ಗ್ರಂಥ ಋಣ


1. ಮಿತ್ರ ಅ. ರಾ. (ಸಂ) : 'ಲಲಿತ ಪ್ರಬಂಧಗಳು'
ವಿಶ್ವಸಮ್ಮೇಳನ, ಪ್ರಕಟಣೆ

2. ವಿ. ಸೀ. : ಸಮಗ್ರ ಗದ್ಯ-1. 'ಲಲಿತ ಪ್ರಬಂಧ ಸಂಪುಟ'
ವಿ. ಸೀ. ಸಂಸ್ಮರಣ ವೇದಿಕೆ, ಬೆಂಗಳೂರು

3. ಸಿಂಪಿ. ವೀರೇಂದ್ರ : 'ಕನ್ನಡದಲ್ಲಿ ಲಲಿತ ಪ್ರಬಂಧಗಳು'
ಕ. ವಿ. ವಿ. ಪ್ರಚಾರ ಉಪನ್ಯಾಸ ಮಾಲೆಯ
ಕಿರು ಕೃತಿ

4. ಸೀತಾರಾಮಯ್ಯ, ಎಂ. ವಿ. : 'ಚಿನ್ನದ ಬೆಳಸು'
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1970

5. ಶೇಷಗಿರಿ ರಾವ್, ಎಲ್. ಎಸ್. : 'ಹೊಸಗನ್ನಡ ಸಾಹಿತ್ಯ'
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

# "ತಿರುಕ್ಕುರಳ್" ಕನ್ನಡ - ತಮಿಳು ಬಾಂಧವ್ಯಕ್ಕೆ ಸೇತು*

—ಎಂ. ಗೋವಿಂದರಾಜು

ವಿಶ್ವಮಾನವ ಕವಿ ತಿರುವಳ್ಳುವರ ಕೃತಿಯಾದ ತಿರುಕ್ಕುರಳ್ ಕನ್ನಡ ಮತ್ತು ತಮಿಳು ಭಾಷೆಗಳ ಬಾಂಧವ್ಯಕ್ಕೆ ಸೇತುವಾಗಿದೆ. "ತಿರುಕ್ಕುರಳಿನ ಮೊದಲ ಕುರಳು ಕನ್ನಡವಾಗಿದೆ ; ಮತ್ತು ಅನೇಕ ಕುರಳುಗಳೂ ಕನ್ನಡವಾಗಿವೆ. ತಿರುಕ್ಕುರಳಿನಲ್ಲಿ ಕನ್ನಡಕ್ಕೂ ತಮಿಳಿಗೂ ಸಾಮ್ಯವಾದ ಅನೇಕ ಮೂಲ ದ್ರಾವಿಡ ಪದಗಳಿವೆ. ತಿರುಕ್ಕುರಳಿನಲ್ಲಿದ್ದು, ತಮಿಳರ ಬಳಕೆಯಲ್ಲಿ ತಪ್ಪಿ ಹೋಗಿರುವ ದ್ರಾವಿಡ ಧಾತು ಪದಗಳು ಇನ್ನೂ ಕನ್ನಡದಲ್ಲಿವೆ. "ಕನ್ನಡ ಮತ್ತು ತಮಿಳು ಭಾಷೆಗಳ ನಡುವೆ ವ್ಯತ್ಯಾಸ ಉಂಟಾಗಲು ಕೆಲವು ಕಾರಣಗಳು" ಎಂಬ ವಿಷಯವನ್ನು ಕುರಿತು ಇಲ್ಲಿ ವಿವರಿಸಲಾಗಿದೆ. ಇವೆಲ್ಲ ವಿಷಯಗಳ ಬಗ್ಗೆ ತಿರುಕ್ಕುರಳ್ ಗ್ರಂಥದಲ್ಲಿರುವ ಪದಗಳನ್ನು ಆಧಾರವಾಗಿಟ್ಟುಕೊಂಡು ಆ ಚೌಕಟ್ಟಿನ ಒಳಗೆ ಪರಿಶೀಲನೆ ಮಾಡಲಾಗಿದೆ.

ತಿರುಕ್ಕುರಳ್‌ನಲ್ಲಿ ಎಲ್ಲಿಯೂ ತಮಿಳು, ತಮಿಳರು, ತಮಿಳುನಾಡು ಎಂಬ ಶಬ್ದ ಇಲ್ಲ. ಆದರೆ ತಿರುವಳ್ಳುವರ್ ತಮ್ಮ ಕೃತಿಯನ್ನು ತಮಿಳು ಭಾಷೆಯಲ್ಲಿ ರಚಿಸಿದ್ದಾರೆ. ಆ ತಿರುಕ್ಕುರಳ್ ಕನ್ನಡಕ್ಕೆ ಹತ್ತಿರವಾದ ತಮಿಳು ಭಾಷೆಯಲ್ಲಿದೆ. ೧೩೩೦ ಕುರಳಿನಲ್ಲಿ ಮೊದಲ ಕುರಳು (ದ್ವಿಪದಿ) 'ಅಚ್ಚ ಕನ್ನಡ'ವಾಗಿದೆ.

**ತಮಿಳು ರೂಪ :** ಅಕರಂ ಮುದಲ ಎಜುತ್ತು ಎಲ್ಲಾಂ ಆದಿ ಬಗವನ್ ಮುದರ್ರೇ ಉಲಗು

**ಕನ್ನಡ ಭಾವ :** ಅಕಾರಂ ಮೊದಲು ಎಜುತ್ತು ಎಲ್ಲಂ ಆದಿ ಭಗವನ್‌ಮೊದಲು + (ಏ) ಲೋಕ.[1]

ಇಲ್ಲಿ ಬರುವ ಪದಗಳನ್ನು ಈ ಕೆಳಕಂಡಂತೆ ವಿವರಿಸಬಹುದಾಗಿದೆ.

೧. **ಅಕರಂ :** ತಮಿಳಿನ ಅಕರಂ. ಕನ್ನಡದಲ್ಲಿ ಅಕಾರಂ ಆಗಿ ದೀರ್ಘ ಸ್ವರಯುಕ್ತವಾಗಿದೆ.

---

* ಮದ್ರಾಸಿನಲ್ಲಿ ಫೆಬ್ರವರಿ 1992ರಲ್ಲಿ ನಡೆದ 'ಪನ್ನಾಟ್ಟು ತಮಿಳು ಉರವು ಮಾನಾಡು' (ಹಲವು ದೇಶಗಳ ತಮಿಳು ಬಾಂಧವ್ಯ ಸಮ್ಮೇಳನ) ದಲ್ಲಿ ಮಂಡಿಸಿದ್ದ ಪ್ರಬಂಧ.

1. ಡಾ|| ಎಂ. ವಿ ಸೀತಾರಾಮಯ್ಯನವರೊಂದಿಗೆ ಈ ಲೇಖಕ ಕೂಡಿ ಮಾಡಿರುವ ಅನುವಾದದಿಂದ.

೨. **ಮುದಲ :** "ಮುದಲ" ಎಂಬ ಪದವೂ "ಮೊದಲು" ಎಂಬ ಕನ್ನಡ ಪದದ ರೂಪಾಂತರವೇ ಆಗಿದೆ. ಉದಾ : ತಮಿಳು-ಕನ್ನಡಗಳ ಈ ಪದಗಳನ್ನು ಗಮನಿಸಿ : ಮುಗ-ಮೊಗ ; ಮುಟ್ಟಿ-ಮೊಟ್ಟೆ ; ಮುನೈ-ಮೊನೆ ; ಮುಱಂ-ಮೊರ ; ಮುಲೈ-ಮೊಲೆ ; ಇಲ್ಲೆಲ್ಲ ಉ-ಒ ಸ್ವರವ್ಯತ್ಯಾಸ ಮಾತ್ರವಿದೆ.

೩. **ಎಱುತ್ತು :** "ಅಕ್ಷರ" ಎಂಬರ್ಥದಲ್ಲಿ ಹಳಗನ್ನಡದಲ್ಲೂ "ಎಱುತ್ತು" ರೂಪವಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ೧೧೩೮ನೇ ಪುಟದಲ್ಲಿ 'ಎೞ್ತು'ಗೆ ಬರಹ ಅಕ್ಷರ ಎಂದು ಅರ್ಥ ಕೊಡಲಾಗಿದೆ. ಗ್ರಂಥ ಸಂಪಾದನೆ ಪುಸ್ತಕದಲ್ಲಿ ದಿ|| ಡಾ|| ಡಿ. ಎಲ್. ನರಸಿಂಹಾಚಾರ್ ಅವರು ಈ ರೀತಿ ಬರೆದಿದ್ದಾರೆ.

ಅಚ್ಚ ಕನ್ನಡಲ್ಲಿ ಬರೆ, ಬರೆಪ, ಬರಹ - ಎಂಬ ಶಬ್ದಗಳು ಲೇಖನಾರ್ಥದಲ್ಲಿ ಇರುವುದು ಎಲ್ಲರಿಗೂ ತಿಳಿದ ವಿಷಯ. ಇದೇ ಅರ್ಥವುಳ್ಳ ಎೞ್ತು ಎಂಬ ಶಬ್ದವೂ ಕನ್ನಡದಲ್ಲಿ ಇತ್ತು. ನೃಪತುಂಗ ಅಮೋಘವರ್ಷನ ಕಾಲದ ಒಂದು ಶಾಸನದಲ್ಲಿ "ಸಿರಿಗಾವುಣ್ಣನ ಎೞ್ತು ಪುದಿದುದು" [IA xii P 215 Dated 866-67 A.D.] ಎಂಬಲ್ಲಿಯೂ, "ಛಲ ಭೂಷಣನ್ ಎೞ್ತು" ಎಂಬಲ್ಲಿಯೂ [E. C. Kolar Siddalaghatta 12 Dated 800 A.D.] ಇದನ್ನು ನೋಡಬಹುದು. ತಮಿಳು ಮಲೆಯಾಳಗಳಲ್ಲಿ 'ಎಱುತ್ತು' ಎಂದೂ, ಕೋತಾ ಭಾಷೆಯಲ್ಲಿ 'ಎಳ್ಥ್' ಎಂದೂ, ಕೊಡಗು ನುಡಿಯಲ್ಲಿ 'ಎಳೀತೀ' ಎಂದೂ ಜ್ಞಾತಿ ಶಬ್ದಗಳಿವೆ. ಗ್ರಂಥವೆಂದರೆ ಎಱುತ್ತು ಎಂದು ಹೇಳಬಹುದಾಗಿದೆ,"[1]

'ಎಱುತ್ತು ಎಂಬುದು ಅಚ್ಚ ಕನ್ನಡ ಶಬ್ದವೇ ಎಂಬುದಕ್ಕೆ ಇದನ್ನೂ ಒಂದು ದಾಖಲೆಯಾಗಿ ಇಟ್ಟುಕೊಳ್ಳಬಹುದಾಗಿದೆ.

೪. **ಎಲ್ಲಾಂ :** ಎಲ್ಲಾಂ ಎಂಬ ಪದ ಹಳಗನ್ನಡದ 'ಎಲ್ಲಂ' ಎಂಬುದರ ದೀರ್ಘೀಕರಣವಾಗಿದೆ. ಶಬ್ದಮಣಿದರ್ಪಣದಲ್ಲಿ 166 ಮತ್ತು 190ನೇ ಸೂತ್ರಗಳಲ್ಲಿ ಎಲ್ಲಂ ಬಳಕೆಯಾಗಿರುವುದನ್ನು ಕಾಣಬಹುದಾಗಿದೆ.

೫. **ಆದಿ :** ಆದಿ ಪದವು ಕನ್ನಡದ ಬಹುಬಳಕೆಯ ರೂಪವಾಗಿದೆ.

೬. **ಬಗವನ್ :** ಕನ್ನಡದ ಸ್ವೀಕರಣಪದ "ಭಗವನ್"ನ ದೇಶ್ಯರೂಪ ವೆನಿಸಿದೆ.

---

1. ಡಾ|| ಡಿ. ಎಲ್. ನರಸಿಂಹಾಚಾರ್, ಕನ್ನಡ ಗ್ರಂಥ ಸಂಪಾದನೆ, ಪುಟ-32.

೭. **ಮುದರ್ರೇ :** ಮುದರ್ರೇ ಎಂಬುದು ಮುದಲು + ಏ ಗಳು ಸಂಧಿಯಾಗಿರುವ ತಮಿಳು ರೂಪ. 'ಲ' ಕಾರಯುಕ್ತ ಸಂಧಿ ಪದ ತಮಿಳಿನಲ್ಲಿ ಱ ಕಾರವಾಗುತ್ತದೆ. ಕನ್ನಡದಲ್ಲಿ 'ಲ' ಕಾರ ಸ್ಪಷ್ಟ ಉಚ್ಚಾರಣೆಯಲ್ಲಿರುವುದರಿಂದ ಅದಕ್ಕೆ ಸ್ವರ ಸೇರಿಸುವ ಸೌಲಭ್ಯವಿದೆ. ಹೀಗಾಗಿ ಈ ಪದವನ್ನು ಮೊದಲು+ಏ='ಮೊದಲೇ' ಎಂದು ಮಾಡುವುದರಲ್ಲಿ ತಪ್ಪೇನೂ ಕಾಣಿಸದು.

೮. **ಉಲಗು :** ಉಲಗು (ಉಲಕು) ಲೋಕ ಎಂಬ ಅರ್ಥವುಳ್ಳ ಪದ. ಇದರ ಮೂಲ ಸಂಸ್ಕೃತವೊ ಅಥವಾ ಮೂಲದ್ರಾವಿಡವೊ ಎಂಬುದರಲ್ಲಿ ಚರ್ಚೆ ಇದೆ. ಇಲ್ಲಿ ಕನ್ನಡದಲ್ಲಿರುವ 'ಲೋಕ' ಎಂಬ ಶಬ್ದ ತಮಿಳಿನಲ್ಲಿ 'ಉಲಗು' ಎಂದಿದೆ ಎಂದು ಭಾವಿಸೋಣ.

ಈ ಮೇಲ್ಕಂಡ ವಿವರಗಳಿಂದಾಗಿ ತಿರುಕ್ಕುರಳಿನ ಮೊದಲ ಕುರಳು ಕನ್ನಡ ರೂಪವೇ ಎಂಬಷ್ಟು ಹತ್ತಿರವಾಗಿದೆ. ಎಂಟು ಶಬ್ದಗಳಲ್ಲಿಯೂ ತಮಿಳಿಗೂ ಕನ್ನಡಕ್ಕೂ ಸಾಮ್ಯವಿದೆ ಎಂಬುದು ಸ್ವಯಂ ಸ್ಪಷ್ಟ.

ಇನ್ನು ಛಂದಸ್ಸಿನ ದೃಷ್ಟಿಯಲ್ಲೂ ಏಳು ಅಂಶಗಣಗಳ ಈ ದ್ವಿಪದಿ ಕನ್ನಡದ 'ಏಳೆ' ಹೆಸರಿನ ಅಂಶ ಛಂದಸ್ಸೇ ಆಗಿದೆ.

ತಿರುಕ್ಕುರಳಿನ ಭಾಷೆ ಕನ್ನಡವೇ ಎನ್ನುವಷ್ಟರ ಮಟ್ಟಿಗೆ ಇಂದಿನ ತಮಿಳಿಗಿಂತ ಹಳಗನ್ನಡದ ಹಲವು ಪದಗಳನ್ನು ಒಳಗೊಂಡು ಕನ್ನಡ ಮತ್ತು ತಮಿಳುಗಳು ಒಂದು ಕಾಲದಲ್ಲಿ ಏಕರೂಪವಾಗಿದ್ದವು ಎಂಬುದನ್ನು ಸಾಬೀತುಪಡಿಸುತ್ತದೆ.

ಕನ್ನಡ ಯಾವುದನ್ನು 'ಹಳಗನ್ನಡ' ಎಂದು ಕರೆಯುತ್ತದೆಯೋ ಅದನ್ನು ತಮಿಳು 'ಶೆಂದಮಿಳು' ಎಂದು ಕರೆಯುತ್ತದೆ. ತಿರುಕ್ಕುರಳ್ ಶೆಂದಮಿಳಿನಲ್ಲಿರುವ ಅರ್ಥಾತ್ ಹಳಗನ್ನಡದಲ್ಲಿರುವ ಕೃತಿಯಾಗಿದೆ ಎನ್ನಬಹುದಾದರೆ ಈ ಕೃತಿಯನ್ನು ಕನ್ನಡ - ತಮಿಳುಗಳ ಬಾಂಧವ್ಯಕ್ಕೆ ಸೇತುವಾಗಿದೆ ಎಂದು ಸುಲಭವಾಗಿ ಗ್ರಹಿಸಬಹುದೆನಿಸುತ್ತದೆ.

ಇದಕ್ಕೆ ಪೂರಕವಾಗಿ ದಿವಂಗತ ಎಂ.ವಿ.ಸೀ. ಅವರ ನೆರವಿನೊಂದಿಗೆ ಅವರ ಜೊತೆಗೂಡಿ ಈ ಲೇಖಕ ಮಾಡಿರುವ ತಿರುಕ್ಕುರಳ್ ಗ್ರಂಥದ ಅನುವಾದವನ್ನು ಗಮನಿಸಬಹುದು. ಈ ಅನುವಾದ ಪ್ರಾಸಯುಕ್ತವಾಗಿದ್ದು ಸ್ಪಷ್ಟವಾಗಿ ಏಳೆ ಛಂದಸ್ಸಿನಲ್ಲಿದ್ದು ಬಹುಮಟ್ಟಿಗೆ ಮೂಲದ ಶೆಂದಮಿಳಿನ ಅಂದರೆ ಹಳಗನ್ನಡದ ರೂಪಗಳನ್ನೇ ಉಳಿಸಿಕೊಳ್ಳುವುದರ ಮೂಲಕ ತಿರುಕ್ಕುರಳ್ ಹೇಗೆ ಹಳಗನ್ನಡ ಕೃತಿಯೇ ಆಗಿದೆ ಎಂಬುದನ್ನು ತೋರಿಸಲು ಪ್ರಯತ್ನಿಸಲಾಗಿದೆ.

# ಷಡ್ವಿಂಶ ಬ್ರಾಹ್ಮಣ — ಜ್ಞಾನಕಾಂಡ : ಒಂದು ಪರಿಚಯ

—ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್ಯ

ಸಾಮವೇದದ 'ಕೌಥುಮ' ಶಾಖೆಯಲ್ಲಿ ಎರಡನೆಯದು 'ಷಡ್ವಿಂಶ ಬ್ರಾಹ್ಮಣ'. ಸಾಂಪ್ರದಾಯಿಕವಾಗಿ 'ಷಡ್ವಿಂಶ' ಎಂದರೆ 'ಇಪ್ಪತ್ತಾರು' ಎಂದರ್ಥ. ಈ ಅರ್ಥಕ್ಕೆ ಅನುಗುಣವಾಗಿ 'ಷಡ್ವಿಂಶ ಬ್ರಾಹ್ಮಣ'ವನ್ನು ಮೊದಲನೆಯ ಬ್ರಾಹ್ಮಣವಾದ 'ಪಂಚವಿಂಶ ಬ್ರಾಹ್ಮಣ' (ತಾಂಡ್ಯ ಬ್ರಾಹ್ಮಣ)ದ ಇಪ್ಪತ್ತಾರನೆಯ ಅಧ್ಯಾಯವೆಂದು ಹೇಳುತ್ತಾರೆ. ಈ ಬ್ರಾಹ್ಮಣದಲ್ಲಿ ಆರು ಅಧ್ಯಾಯಗಳಿವೆ. ಆರನೆಯ ಅಧ್ಯಾಯವು 'ಷಡ್ವಿಂಶ ಬ್ರಾಹ್ಮಣ'ಕ್ಕೆ ಅನಂತರ ಸೇರಿಸಿರಬಹುದೆಂಬ ವಿಚಾರವಿದೆ. ಈ ಆರನೆಯ ಅಧ್ಯಾಯಕ್ಕೆ 'ಅದ್ಭುತ ಬ್ರಾಹ್ಮಣ'ವೆಂದೂ ಹೆಸರಿದೆ. ಈ ವಿಧವಾದ ಅರ್ಥದಲ್ಲಿ 'ಷಡ್ವಿಂಶ ಬ್ರಾಹ್ಮಣಕ್ಕೂ' 'ಸಾಮ ವಿಧಾನ' ಬ್ರಾಹ್ಮಣಕ್ಕೂ ಯಾವುದೇ ವಿಧವಾದ 'ನಿರಂತರತೆ'ಯು ಕಾಣಬರುವುದಿಲ್ಲ*.

ಸಾಂಪ್ರದಾಯಿಕವಾಗಿ 'ಷಡ್ವಿಂಶ ಬ್ರಾಹ್ಮಣ'ದ ಸಾರವು ಈ ರೀತಿ ಇದೆ : ಸುಬ್ರಹ್ಮಣ್ಯ ಎಂಬ ಋತ್ವಿಕ್ಕಿನ ವಿಚಾರ, ಮೂರು ಸವನಗಳು, ವಿಶ್ವರೂಪ ದರ್ಶನ, ಬ್ರಹ್ಮ ಕರ್ತವ್ಯ, ವ್ಯಾಹೃತಿ ಹೋಮಗಳು, ನೈಮಿತ್ತಿಕ ಪ್ರಾಯಶ್ಚಿತ್ತ, ಸೌಮ್ಯ ಚರುವಿಧಿ, ಬಹಿಷ್ಪವಮಾನ ಧರ್ಮಗಳು, ಪ್ರಕೀರ್ಣಕವು, ಹೋತ್ರಾದಿಗಳ ಆಹ್ವಾನ, ಋತ್ವಿಕ್ಕುಗಳು ತಿಳಿಯಬೇಕಾದ ಯಾಗ ವಿಚಾರ, ನೈಮಿತ್ತಿಕ ಹೋಮಗಳು, ಋತ್ವಿಕ್ಕುಗಳಲ್ಲಿ ಪ್ರಾರ್ಥನಾ ವಿಧಾನ, ಋತ್ವಿಕ್ಕುಗಳ ಆಮಂತ್ರಣ, ಯಾಗ ಕಾರ್ಯಗಳು, ಅವಭೃಥ ಕಾರ್ಯಗಳು, ಅನಂತರ ಶತ್ರು ಸಂಹಾರ, ಆಶ್ರಿತರ ಕ್ಷೇಮಕಾರ್ಯ, ದ್ವಾದಶಾಹಾದಿ ಯಾಗಗಳ ವಿಷಯ, ಶ್ಯೇನಾದಿ ಕಾರ್ಯಗಳು, ವೈಶ್ವದೇವ ಕಾರ್ಯ, ಅಗ್ನಿಹೋತ್ರ, ಔದುಂಬರೀ ವಿಧಿ, ಯೂಪ ವಿಧಿ, ಸಂಧ್ಯಾ ವಿಧಿ, ಅನಂತರ ಚಂದ್ರನ ಕ್ಷಯ-ವೃದ್ಧಿ ವಿಚಾರ, ಸ್ವಾಹಾ ವಿಧಿ, ಅನಂತರ ಅದ್ಭುತ ಬ್ರಾಹ್ಮಣವಲ್ಲಿ ಅದ್ಭುತ ಶಾಂತಿ ವಿಚಾರ.

ಈ ಬ್ರಾಹ್ಮಣದಲ್ಲಿ ಶತ್ರು ಸಂಹಾರ, ಶ್ಯೇನಾದಿ ಕಾರ್ಯಗಳು ಸಹ ಅನಂತರದ ಕಾಲದಲ್ಲಿ ಸೇರಿಸಿರಬಹುದೆಂದು ವಿಚಾರವಿದೆ. ಈ ಕಾರ್ಯಗಳು ಬ್ರಾಹ್ಮಣಗಳಲ್ಲಿ ವಿಚಾರ ಮಾಡಲ್ಪಡುವ ವಿಚಾರಗಳಲ್ಲವೆಂದೂ, ಅಭಿಪ್ರಾಯವಿದೆ.

---

* ಇದೇ ಲೇಖಕನ ಕರ್ನಾಟಕ ಲೋಚನ, ಜೂನ್ 92 ರ ಸಂಚಿಕೆಯಲ್ಲಿ ಪ್ರಕಟವಾದ ಸಾಮವಿಧಾನ ಬ್ರಾಹ್ಮಣದ ಜ್ಞಾನಕಾಂಡದ ಪರಿಚಯವನ್ನು ಗಮನಿಸಬಹುದು.

ಈ ಅಧ್ಯಯನದಲ್ಲಿ ಜ್ಞಾನಕಾಂಡದ ವಿಷಯವನ್ನು ಪ್ರಸ್ತಾವಿಸುತ್ತ, ಹಾಗೆಯೇ ಷಡ್ವಿಂಶ ಮತ್ತು ಸಾಮವಿಧಾನ ಬ್ರಾಹ್ಮಣಗಳ 'ಅನುಕ್ರಮತ್ವ'ವನ್ನು ತಿಳಿಸ ಲಾಗುವುದು.

ಮೊದಲನೆಯದಾಗಿ, ಇಡೀ ವಿಶ್ವದ ಸಮಸ್ತ ಜೀವಿಗಳ ಪರಮ ಧ್ಯೇಯವೆಂದರೆ ತೃಪ್ತಿ ಮತ್ತು ನೆಮ್ಮದಿ. ಬೇರೆ ಬೇರೆ ಪ್ರಾಣಿಗಳು ಬೇರೆ ಬೇರೆ ವಿಧಾನಗಳನ್ನು ಇದಕ್ಕಾಗಿ ಅನುಸರಿಸುವುದನ್ನು ನಾವು ಕಾಣಬಹುದು.

ಷಡ್ವಿಂಶ ಬ್ರಾಹ್ಮಣದಲ್ಲಿ 'ಆರು' ಅಧ್ಯಾಯಗಳಿವೆ. 'ಷಡ್' ಎಂದರೆ ಆರು ಅಧ್ಯಾಯಗಳು. 'ವಿಂಶ' ಎಂದರೆ 'ವೃದ್ಧಿ'. 'ಷಡ್ವಿಂಶ' ವೆಂದರೆ 'ಜ್ಞಾನವೃದ್ಧಿ' ಮಾಡುವ 'ಆರು' ಅಧ್ಯಾಯಗಳನ್ನುಳ್ಳ ಗ್ರಂಥವೆಂದು ಹೇಳಬಹುದು.

ಜ್ಞಾನಿಗೆ ಸಮಾಜದಲ್ಲಿ 'ಆರು' ವಿಧವಾದ ಕರ್ತವ್ಯಗಳಿವೆ. ಅವುಗಳು ಅಧ್ಯಯನ, ಅಧ್ಯಾಪನ, ಪರಿತ್ಯಾಜ್ಯ, ಪರಿತ್ಯಾಜ್ಯ ಸಹಾಯ, ದಾನ ಮತ್ತು ಪ್ರತಿಗ್ರಹ. ಜ್ಞಾನಿಯ ಈ 'ಆರು' ಕರ್ತವ್ಯಗಳ ಪರಿಪಾಲನೆಯಿಂದ ಸಮಾಜದಲ್ಲಿ ಸುಖ, ಶಾಂತಿ ಗಳು ನೆಲಸುತ್ತವೆ. ಈ 'ಆರು' ಕರ್ತವ್ಯಗಳ ಪರಿಪಾಲನಾ ವಿಧಾನಗಳನ್ನು ಈ ಬ್ರಾಹ್ಮಣದಲ್ಲಿ ವಿವರಿಸಲಾಗಿದೆಯೆಂಬುದು ಇನ್ನೊಂದು ವಿಚಾರ.

ಮಾನವನನ್ನು ಪೀಡಿಸುವ 'ಆರು' ಪಾಪಗಳೆಂದರೆ—ಅಪೇಕ್ಷೆ, ಕೋಪ,ಲೋಭ ಅಲ್ಪಭಾವ, ಅಹಂಕಾರ ಮತ್ತು ಮತ್ಸರ. 'ವಿಂಶ' ಎಂದರೆ 'ವಿಮುಖತೆ' ಎಂದೂ ಅರ್ಥವಿದೆ. 'ಷಡ್ವಿಂಶ' ಎಂದರೆ ಈ 'ಆರು ಪಾಪ'ಗಳಿಂದ 'ವಿಮುಖ' ಗೊಳಿಸುವ ವಿಧಾನಗಳನ್ನು ತಿಳಿಸುವ 'ಗ್ರಂಥ'ವೆಂದೂ ಹೇಳಬಹುದು.

ಜ್ಞಾನಿಯು ತಾನೊಬ್ಬನೇ ಈ 'ಆರು' ಪಾಪಗಳಿಂದ ವಿಮುಖನಾಗುವುದೇ ಅಲ್ಲದೆ, ಇತರರಿಗೂ ಸಹ 'ಪಾಪ' ವಿಮುಖರಾಗಲು ಸಹಾಯವಾಗುತ್ತಾನೆ. ಇದರಿಂದ ಸಮಾಜವು 'ಉದಾತ್ತ' ಗುಣ ಪಡೆಯುತ್ತದೆ.

'ಷಡ್ವಿಂಶ ಬ್ರಾಹ್ಮಣ'ದಲ್ಲಿ ಈ ಆರು 'ಪಾಪ' ಗಳಿಂದ ವಿಮುಖರಾಗಲು ಇಪ್ಪತ್ತಾರು ಜ್ಞಾನಮಾರ್ಗ ವಿಧಾನಗಳು ಮತ್ತು ಇವುಗಳಿಂದ ಸಿದ್ಧಿಸುವ ಇಪ್ಪತ್ತಾರು 'ಶ್ರೇಷ್ಠ ಗುಣ'ಗಳನ್ನು ವಿವರಿಸಲಾಗಿದೆ. ಈ ಇಪ್ಪತ್ತಾರು ವಿಧಾನಗಳು ಮತ್ತು ಇಪ್ಪತ್ತಾರು 'ಶ್ರೇಷ್ಠ ಗುಣ' ಗಳನ್ನು 'ಷಡ್ವಿಂಶ ಬ್ರಾಹ್ಮಣ'ವು ನಿರೂಪಿಸುತ್ತದೆ. ಅವುಗಳನ್ನು ಈ ಕೆಳಗಿನಂತೆ ಪಟ್ಟಿಮಾಡಬಹುದು. ಸಂಖ್ಯೆಗಳು ವಿಧಾನಗಳನ್ನು ಸೂಚಿಸುತ್ತವೆ—

೧. ಪ್ರವರ್ತಕ ಗುಣ.

೨. ಉತ್ತಮ, ಅತ್ಯುತ್ತಮ ಮತ್ತು ಸರ್ವೋತ್ತಮಗಳೆಂಬ ಮೂರು ಬಗೆಯ ಮಾನಸಿಕ ಸ್ಥಿತಿಗಳು.

೩. ಇಡೀ 'ವಿಶ್ವ'ದಲ್ಲಿ 'ಜ್ಞಾನದ ಪೂರ್ಣ ವ್ಯಾಪ್ತಿ'.

೪. ಜ್ಞಾನಿಯ ಕರ್ತವ್ಯ ಮತ್ತು ಅದರ ಪರಿಪಾಲನೆ.

೫. ಮಾನಸಿಕ ಸ್ತಿಮಿತತೆ.

೬. ನಿರಂತರ ಮಾನಸಿಕ ಸ್ತಿಮಿತತೆ.

೭. ಜ್ಞಾನ ಪ್ರಸರಣದಿಂದುಂಟಾಗುವ ಸಮಾಜ ಸುಖದ ಸಂರಕ್ಷಣೆ.

೮. ಪಾಪಕೃತ್ಯಗಳನ್ನು ನಾಶಗೊಳಿಸುವ 'ಧೀ' ಶಕ್ತಿ.

೯. ವಿಶ್ವದ ವಿವಿಧ ವಿಷಯಗಳ ಜ್ಞಾನ.

೧೦. ಜ್ಞಾನ ಸಂಪಾದನೆಯ ಮಾರ್ಗಗಳು.

೧೧. ಜ್ಞಾನಿಯಲ್ಲಿ ನಿಷ್ಠಾವಂತ ಸೇವೆಯ ಮೂಲಕ ಜ್ಞಾನ ಕೌಶಲ ಸಂಪಾದನೆ.

೧೨. ನಿರಂತರ ಜ್ಞಾನ ಸಂಪಾದನ ಮಾರ್ಗ.

೧೩. ಜ್ಞಾನಿಯಲ್ಲಿ ತೋರಬೇಕಾದ ನಿಷ್ಠೆ.

೧೪. ಜ್ಞಾನ ಮತ್ತು ಜ್ಞಾನಿಗಳಿಗೆ ನೀಡಬೇಕಾದ ಪ್ರೋತ್ಸಾಹ ಮಾರ್ಗ.

೧೫. ಜ್ಞಾನ ಪೂರಕ ಮಾರ್ಗಗಳು.

೧೬. ದುಷ್ಕಾರ್ಯ ವಿಮುಖತೆ ಮತ್ತು ಮುಂದಿನ ಪೀಳಿಗೆಗೆ ಉದಾತ್ತಜೀವನ ಪಥದಲ್ಲಿ ಸಾಗಲು ಮಾಡಬೇಕಾದ ಸಹಾಯಗಳು.

೧೭. ಅಜ್ಞಾನ ನಿರ್ಮೂಲನ ಮಾರ್ಗಗಳು.

೧೮. ಜ್ಞಾನದಿಂದುಂಟಾಗುವ ತಿಳಿವಳಿಕೆ.

೧೯. ಇಡೀ ವಿಶ್ವಕ್ಕೆ 'ಜ್ಞಾನ ಪ್ರಸರಣ' ಮಾಡಬೇಕಾದ ಕರ್ತವ್ಯ.

೨೦. ಜ್ಞಾನ ಸಂಪಾದನೆಯಿಂದುಂಟಾಗುವ ಉತ್ಕರ್ಷ.

೨೧. ಕೋಪ ವಿಮುಖತೆ.

೨೨. ದುಷ್ಟಾಲೋಚನೆಗಳ ತ್ಯಾಗ.

೨೩. ಪಕ್ಷಪಾತವನ್ನು ತೊಡೆಯುವ ಮಾರ್ಗಗಳು.

೨೪. ಪೆಡಸುತನ ಮತ್ತು ಮೋಹಗಳನ್ನು ತೊಡೆಯುವ ಮಾರ್ಗ.

೨೫. ತೃಪ್ತಿಭಾವ ಮಾರ್ಗ.

೨೬. ಮೂರ್ಖ (ಭ್ರಾಂತ) ವಿಷಯಗಳಿಂದ ದೂರವಾಗುವ ಮಾರ್ಗಗಳು.

'ಸಾಮ ವಿಧಾನ ಬ್ರಾಹ್ಮಣ'ವು 'ಸಾಮಗಾನ'ದ ಮೂಲಕ 'ಭ್ರಾಂತ' ವಿಷಯಗಳಿಂದ ದೂರವಾಗುವ ಅನೇಕ ಮಾರ್ಗಗಳನ್ನು ನಿರೂಪಿಸುತ್ತದೆಂಬುದು ನಮಗೆಲ್ಲರಿಗೂ ತಿಳಿದಿರುವ ವಿಚಾರ. 'ಷಡ್ವಿಂಶ' ಬ್ರಾಹ್ಮಣದ 'ಆರನೆಯ ಅಧ್ಯಾಯ' ವೂ ಸಹ 'ಭ್ರಾಂತ ವಿಷಯಗಳಿಂದ ದೂರವಾಗುವ ಮಾರ್ಗ'ಗಳಿಗಾಗಿ 'ಸಾಮಗಾನ'ವನ್ನೇ ನಿರೂಪಿಸಿರುತ್ತದೆ. ಈ ಸಂಬಂಧವೇ ಷಡ್ವಿಂಶ ಮತ್ತು ಸಾಮವಿಧಾನ ಬ್ರಾಹ್ಮಣಗಳಿಗೆ 'ಅನುಕ್ರಮಣ'ತ್ವವನ್ನು ನಿರೂಪಿಸುತ್ತದೆ ಎಂದು ಹೇಳಬಹುದು.

## ಗ್ರಂಥಾವಲೋಕನ

೧. ಷಡ್ವಿಂಶ ಬ್ರಾಹ್ಮಣ — ಡಾ॥ ಬಿ. ರಾಮಚಂದ್ರ ಶರ್ಮ, ಕೇಂದ್ರೀಯ ಸಂಸ್ಕೃತ ವಿದ್ಯಾಪೀಠ, ತಿರುಪತಿ.—೧೯೮೩ (ಸಂಸ್ಕೃತ)

೨. ಷಡ್ವಿಂಶ ಬ್ರಾಹ್ಮಣ — ಬೊಲ್ಲಿ - ಉಟ್ರಿಚೆಟ್—೧೯೫೬ (ಆಂಗ್ಲಾನುವಾದ)

೩. ಷಡ್ವಿಂಶ ಬ್ರಾಹ್ಮಣ — ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್ಯ, ಜ್ಞಾನ ಕಾಂಡ ಭಾಷ್ಯ (ಅಪ್ರಕಟಿತ) ೧೯೯೨ (ಆಂಗ್ಲ)

೪. ಷಡ್ವಿಂಶ ಬ್ರಾಹ್ಮಣ — ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್ಯ, (ಕನ್ನಡಾನುವಾದ) (ಅಪ್ರಕಟಿತ) ೧೯೯೧.

---

# ಟೀಕೆ – ಟಿಪ್ಪಣಿ

## ಕಾವ್ಯಾರ್ಥ ಕುತೂಹಲ

—ಪಿ. ವಿ. ಜೋಶಿ

ಪಂಪ-ಕಾಲಿದಾಸರ ಕಾವ್ಯಖಂಡಗಳನ್ನು ನೆನೆದು ಆನಂದಿಸುತ್ತಿದ್ದಾಗ ಸುಪ್ರಸಿದ್ಧ ಪದ್ಯಗಳಲ್ಲಿನ ಪದಪುಂಜ ಕೆಲವಕ್ಕೆ ಪಂಡಿತರು ಸೂಚಿಸಿರುವ ಸಾಂಪ್ರದಾಯಿಕ ಅರ್ಥವು ಸಮಂಜಸವಲ್ಲವೆನಿಸಿತಾಗಿ, ನನಗೆ ಸಂದರ್ಭೋಚಿತವೆಂದು ತೋರಿರುವ ಅರ್ಥಕಲ್ಪನೆಯನ್ನು ಕಾವ್ಯಾಸಕ್ತರ ಮುಂದಿಡುತ್ತಿದ್ದೇನೆ.

೧

ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ

ಎಂಬುದು ಆದಿಕವಿ ಪಂಪನು ಅರ್ಜುನನ ಬಾಯಲ್ಲಿ ಹೇಳಿಸಿರುವ ಮಾತು. ಇದರಲ್ಲಿ ಕೊನೆಯ ಸಾಲಿನ ಅರ್ಥವನ್ನು ತಿಳಿದವರು ಇಂದಿನ ವರೆಗೆ ಹೇಳುತ್ತ ಬಂದಿರುವುದೇನೆಂದರೆ "ಯಾರು ಹಾಗೆ ನೆನೆಯಬೇಡವೆಂದು ಒತ್ತಾಯಿಸಿ ಅಂಕುಶದಿಂದ ತಿವಿದರೂ ನನ್ನ ಮನಸ್ಸು ಬನವಾಸಿ ದೇಶವನ್ನು ನೆನಸುತ್ತಲೇ ಇರುವುದು" ಎಂದು. ಈ ಅರ್ಥ ಅಸಮಂಜಸವೆಂದು ನನಗೆ ತೋರುವುದಕ್ಕೆ ಕಾರಣಗಳು ಹೀಗಿವೆ: ಇಲ್ಲಿ ಮೊದಲಿನಿಂದಲೂ ಸುಖವಾದ ಅನುಭವಗಳ ಸ್ಮರಣೆಯಿದೆ. ಕಾಲಿದಾಸನ "ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್ ಪರ್ಯುತ್ಸುಖೋ ಭವತಿ ಯತ್ಸುಪಿತೋಽಪಿ ಜಂತುಃ" ಎಂಬ ಮಾತಿಗೆ ಪಂಪನ ಈ ವಾಕ್ಯ ವಿವರಣದಂತಿದೆ. ಈ ಸುಖಾನುಭವಗಳ ಶ್ರೇಣಿಯಲ್ಲಿ ಯಾರೇ ಆದರೂ ಅಂಕುಶದಿಂದ ತಿವಿಯುವ ಮಾತು ಯಾಕೆ? ಅರ್ಜುನನಿಗೆ ಅಂಕುಶದ ಭಯ ಯಾರಿಂದ? ಮಾನಸಿಕ ಸ್ಮರಣೆಯನ್ನು ತಡೆಯುವುದಕ್ಕೆ ಹೊರಗಿನವರಿಗೆ ಪ್ರೇರಣೆ ಹೇಗೆ? ಆದ್ದರಿಂದ ಈ ಪಾಠದ ಪರಿಷ್ಕಾರವೋ ಬೇರೆ ಅರ್ಥವಿವರಣೆಯೋ ಅವಶ್ಯವೆಂದು ತೋರಿದರೂ ಅದಕ್ಕೆ ದಾರಿ ಕಂಡಿಲ್ಲ. ಈ ಮಧ್ಯೆ ಇನ್ನೊಂದು ಸಂದರ್ಭದಲ್ಲಿ ನಮ್ಮ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ನೋಡುತ್ತಿದ್ದಾಗ ಅಜು ಶಬ್ದಕ್ಕೆ ಒಂದು ಅರ್ಥ "ನಿಚುಲವೃಕ್ಷ" ಎಂದು ಕಣ್ಣಿಗೆ ಬಿತ್ತು. ಅದೆಂತಹ ವೃಕ್ಷ? ಆಪ್ಟೆಯವರ ಸುಪ್ರಸಿದ್ಧ ಸಂಸ್ಕೃತ-ಇಂಗ್ಲಿಷ್ ಶಬ್ದಕೋಶ A kind of reed - ಒಂದು ಜೊಂಡು ಹುಲ್ಲಿನ ಜಾತಿ ಎನ್ನುತ್ತದೆ. ಅದು ವೃಕ್ಷವಾಗಲಾರದು. "ಸ್ಥಾನಾದಸ್ಮಾತ್ ಸರಸನಿಚುಲಾದುತ್ಪತೋದಙ್ಮು

ಮುಖಃ ಖಂ" (ಸರಸ ನಿಚುಲಯುತವಾದ ಈ ಸ್ಥಾನದಿಂದ ಉತ್ತರಾಭಿಮುಖವಾಗಿ ಆಕಾಶಕ್ಕೆ ಏರು) ಎಂಬ ಮೇಘದೂತದ ವಾಕ್ಯದ ಮೇಲೆ ಮಲ್ಲಿನಾಥನ ವಿವರಣ ಸಮಂಜಸವಾಗಿಲ್ಲವೆಂದು ಆಪ್ಟೆಯವರೇ ಹೇಳಿದ್ದಾರೆ. ಇಲ್ಲಿ ಹೇಳಿರುವ ಸ್ಥಾನ ರಾಮಗಿರಿ. ಅಲ್ಲಿಂದ ಉತ್ತರಕ್ಕೆ ಹೋದ ಮೇಲೆ ಚಿತ್ರಕೂಟದ ಉಲ್ಲೇಖವಿದೆ. ಆಗ ಋತು ಆಷಾಢಕಾಲ. ರಾಮಗಿರಿಯ ನೆಲೆಯಲ್ಲಿ ಆಷಾಢಮಾಸದಲ್ಲಿ "ಸರಸ" ವಾಗಿರುವ "ನಿಚುಲ" ಯಾವುದು ?

ಅಮರಕೋಶವು ನಿಚುಲ = ಪನಸ ಎನ್ನುತ್ತದೆ ; ಹಲಸಿನ ಮರ ! ಆಷಾಢದಲ್ಲಿ ಅದು ಸರಸವಾಗಿರುವುದೂ ಅಹುದು. ಅದು ಬನವಾಸಿ ನಾಡಿನಲ್ಲಿ ವಿಜೃಂಭಿಸುವ ವೃಕ್ಷ. ಅನೇಕ ಮರಬಳ್ಳಿಗಳನ್ನು ಹೆಸರಿಸಿದ ಪಂಪ ಹಲಸನ್ನು ಹೇಳದೆ ಇರುವುದು ಸಾಧ್ಯವಿಲ್ಲ. ಇಲ್ಲಿ "ಆರಂಕುಸ ಮಿಟ್ಟೊಡಂ" ಎಂಬಲ್ಲಿ ಅದು ಹಲಸಿನ ಮರವಾದರೆ ಅಂಕುಸವಿಡುವುದೆಂದರೇನು ? ಹಲಸಿನಕಾಯಿ ಹೂವು ಇಲ್ಲದೆ ಹೀಚು ಮರದ ತೊಗಟೆಯನ್ನು ಸೀಳಿ ಹೊರಗೆ ಬರುವುದರಿಂದ ಅದನ್ನು ಅಂಕುಸವೆನ್ನಬಹುದೆ ? ಅಥವಾ ಆ ಮರದ ಎಳೆಯ ಎಲೆಗಳು ಬೇರೆ ಮರಗಳ ಎಲೆಗಳಂತೆ ಜೋಲಾಡದೆ ಆಕಾಶದತ್ತ ಸೆಟೆದು ನಿಲ್ಲುವುದರಿಂದ ಆ ಕೊನರುಗಳನ್ನು ಅಂಕುಸವೆನ್ನಬಹುದೆ ? ಆ ಮರಕ್ಕೆ ಹೂವಿನ ಸುಗಂಧವಿಲ್ಲದಿದ್ದರೂ ದಟ್ಟ ಹಸಿರಿನ ತಳಿರ ವೈಭವ ಕಣ್ಣು ತಣಿಸುತ್ತದೆ. ರಸಭರಿತವಾದ ಹಲಸಿನ ಹಣ್ಣು ಆಷಾಢದಲ್ಲಿ "ಸರಸ"ವಲ್ಲವಾದರೆ ಇನ್ನೇನು ? ಆದ್ದರಿಂದ ಕಾಲಿದಾಸ ಅದನ್ನು "ಸರಸನಿಚುಲ" ಎಂದಿರುವುದು ಉಚಿತವೇ. ಪಂಪನು ಹಲಸಿನ ಮರವನ್ನು ಬೇರೆಯಾಗಿ ಹೆಸರಿಸಿಲ್ಲದಿರುವುದರಿಂದ ಇಲ್ಲಿ ಆಱು = ಹಲಸಿನ ಮರವೇ ಆಗಿರಬೇಕು. ಅದು "ಅಂಕುಸವಿಟ್ಟೊಡಂ" ಎಂದರೆ ತನ್ನ ಪರಮೋತ್ಕರ್ಷದಲ್ಲಿದ್ದಾಗ. ಆ ಸಂದರ್ಭದಲ್ಲಿ ಹೊಂದಿಕೆಯಾಗದ ಹಿಂಸಾ ಮೂಲವಾದ "ಅಂಕುಶದಿಂದ ತಿವಿದರೂ" ಎಂಬ ಅರ್ಥವನ್ನು ಹೇಳದೆ ಅಲ್ಲಿ ಇತರ ಸುಖಾನುಭವಗಳ ಶ್ರೇಣಿಯಲ್ಲಿ ಹೊಂದುವ ಹಲಸಿನ ಮರದ ಸೊಬಗನ್ನೋ, ಅದರ ಹಣ್ಣಿನ ರುಚಿಯನ್ನೋ ಕವಿಯು ನೆನೆದಿದ್ದಾನೆ ಎನ್ನುವುದು ಉಚಿತವಲ್ಲವೇ ?

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಆಱು ಎಂಬ ಕನ್ನಡ ಪದಕ್ಕೆ ರೂಢವಾದ ಹಲಸಿನ ಮರ ಎಂದು ಹೇಳದೆ ನಿಚುಲವೃಕ್ಷ ಎಂದಿರುವುದೂ ಸೋಜಿಗವಲ್ಲವೆ ?

೨

ಮಹಾಕವಿ ಕಾಲಿದಾಸನ 'ಶಾಕುಂತಲ'ದ ಒಂದು ಸುಪ್ರಸಿದ್ಧ ಪದ್ಯ ಇದು :

ಶುಶ್ರೂಷಸ್ವ ಗುರೂನ್ ಕುರು ಪ್ರಿಯಸಖೀ ವೃತ್ತಿಂ ಸಪತ್ನೀಜನೇ
ಭರ್ತುರ್ವಿ ಪ್ರಕೃತಾಪಿ ರೋಷಣತಯಾ ಮಾಸ್ಮ ಪ್ರತೀಪಂ ಗಮಃ ।
ಭೂಯಿಷ್ಠಂ ಭವ ದಕ್ಷಿಣಾಪರಿಜನೇ ಭಾಗ್ಯೇಷ್ವನುತ್ಸೇಕಿನೀ
ಯಾಂತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ

ಕೊನೆಯ "ವಾಮಾಃ ಕುಲಸ್ಯಾಧಯಃ" ಎಂದು ಮುಗಿಯುವ ಪದಪುಂಜಕ್ಕೆ ಪಂಡಿತರು ಹೇಳಿರುವ ಅರ್ಥ ಸಮಂಜಸವಲ್ಲವೆನಿಸುತ್ತದೆ. ಏಕೆಂದರೆ ಆ ಶ್ಲೋಕದ ಮಾತುಗಳು ಹಿತವಚನಗಳೇ ಹೊರತು ಆದೇಶಗಳಲ್ಲ. ಅಂತಹ ಸಂದರ್ಭದಲ್ಲಿ ಕಣ್ವರಂಥ ಮೃದು ಹೃದಯದ ತಂದೆ ಅಪನಂಬಿಕೆಯನ್ನು ಸೂಚಿಸಲಾರರು. "ಹೀಗೆ ನೀನು ನಡೆಯದಿದ್ದರೆ" (ವಾಮಾಃ)-ಎನ್ನುವ ಎಚ್ಚರಿಕೆಯ ಮಾತು ಅಪನಂಬಿಕೆಯನ್ನು ಸೂಚಿಸುತ್ತದೆ. ಇಲ್ಲಿರುವ ವಾಮಾಃ, ಮತ್ತು ಆಧಯಃ ಎನ್ನುವ ಪದಗಳಿಗೆ ಬೇರೆ ಅರ್ಥಗಳೂ ಇವೆ. ವಾಮಾಃ ಎಂದರೆ ಅಮರಕೋಶವೇನೋ "ಪ್ರತೀಪದರ್ಶಿನೀ" ಎಂದೇ ಹೇಳುತ್ತದೆ. ಆದರೆ ಅಮರಸಿಂಹನು ತಾನು ಹೇಳುವ ಅರ್ಥಗಳಿಗೆ ಪ್ರಯೋಗ ಸಂದರ್ಭಗಳನ್ನು ಸೂಚಿಸುವುದಿಲ್ಲ. ಅವನ ಕಾಲಕ್ಕೆ ಕಾಲಿದಾಸನ ನಾಟಕ ಬಹುಶಃ ಅನೇಕ ಶತಮಾನಗಳಷ್ಟು ಹಳೆಯದಾಗಿ ಪಾಂಡಿತ್ಯಜಡರ ಅಧ್ಯಯನದ ವಿಷಯವಾಗಿತ್ತೆಂದು ತೋರುತ್ತದೆ. 'ಪ್ರತೀಪದರ್ಶಿನೀ' ಎನ್ನುವ ಅರ್ಥ ನಕಾರಾತ್ಮಕ. ಅದೇ ಪದಕ್ಕೆ "ಕೋಮಲೆ" ಎಂಬ ಅರ್ಥವು ಸಹಜ. ಆ ಮಾತು ಪ್ರಯೋಗದಲ್ಲಿ ವ್ಯಾಪಕವಾಗಿ ಬಳಕೆಯಾಗಿದೆ. ಆಪ್ಟೆಯವರ ಶಬ್ದಕೋಶ ಪ್ರಯೋಗ ಸಂದರ್ಭಗಳನ್ನು ಸೂಚಿಸಿ ಕೋಮಲೆಯೆಂಬ ಅರ್ಥವನ್ನು ಸೂಚಿಸುತ್ತದೆ. ಅಮರ ಕೋಶದ ಸಂಕ್ಷೇಪ ಕ್ರಿಯೆಯಲ್ಲಿ ಇಂತಹ ಅರ್ಥ ವಿಸ್ತರಣೆಗೆ ಅವಕಾಶವಿಲ್ಲ. ಆದುದರಿಂದ ನಾವು ಇಲ್ಲಿ ಅಮರಕೋಶವನ್ನು ಬದಿಗಿಟ್ಟು ಬೇರೆ ಪ್ರಯೋಗಗಳನ್ನು ಗಮನಿಸಿ "ಕೋಮಲೆ" ಎಂಬ ಅರ್ಥವನ್ನು ಹೇಳಬಹುದು. ಹಾಗೆಯೇ "ಆಧಯಃ" ಎಂದರೆ ಪೀಡೆಗಳು ಎಂಬುದೊಂದೇ ಅರ್ಥವಲ್ಲ. "ಆಧಾರ ಭೂಮಿ" "ತಳಹದಿ" ಎಂಬ ಅರ್ಥಗಳನ್ನೂ ಹೇಳಬಹುದು. ಇದನ್ನು ಎಲ್ಲ ಕೋಶಗಳೂ ಸಮರ್ಥಿಸುತ್ತವೆ. ಸಹಜಾರ್ಥದ ಪದಗಳು ನಿರಾಶೆಯನ್ನೋ ಅಣಕವನ್ನೋ ಸೂಚಿಸುವುದಕ್ಕೆ ವಿರೋಧಾರ್ಥದಲ್ಲಿ ಬಳಕೆಯಾಗುವ ಮಾರ್ಪಾಟು ಸಾರ್ವತ್ರಿಕವಾಗಿ ಕಂಡು ಬರುತ್ತದೆ : ಸಣಕಲನನ್ನು ಪೈಲವಾನ ಎಂದಂತೆ ; ಕುರೂಪಿಯನ್ನು ಕಾಮಣ್ಣ ಎಂದಂತೆ ; ಆಚಾರ ಹೀನನನ್ನು ಮಹಾಬ್ರಾಹ್ಮಣ ಎಂದಂತೆ. ನಮ್ಮ ಪಾರಿಜಾತ ಆಟಗಳಲ್ಲಿ ಕೃಷ್ಣ ರುಕ್ಮಿಣಿ ಸತ್ಯಭಾಮೆಯರ ವ್ಯವಹಾರಗಳನ್ನು ಗಮನಿಸಿದರೆ ವಾಮಾ ಪದದ ಎರಡು ಅರ್ಥಗಳು ಹೇಗೆ ರೂಢವಾಗಿರಬಹುದೆಂದು ತಿಳಿಯುವಂತಿದೆ. ಹಾಗೆಂದು ಸಹಜಾರ್ಥ ಮರೆ ಎಂದಿಗೂ ಆಗುವುದಿಲ್ಲ. ಆದ್ದರಿಂದ ಈ ಪದ ಪುಂಜಕ್ಕೆ "ವಾಮಾಃ ಯುವತಯಃ" - ಕೋಮಲೆಯರಾದ ಯುವತಿಯರು ಗೃಹಿಣೀ ಪದವನ್ನು ಪಡೆದು (ಅದಕ್ಕೆ ಅವಶ್ಯಕವಾದ ಸ್ಥೈರ್ಯವನ್ನೂ ಕೆಲಮಟ್ಟಿನ ಕಾಠಿನ್ಯವನ್ನೂ ರೂಢಿಸಿಕೊಂಡು) ಒಂದು ಕಾಲಕ್ಕೆ ಆಧಾರಭೂಮಿಯಾಗುತ್ತಾರೆ. —(ಇದು ನಿಸರ್ಗ ನಿಯಮ, ಎಂತಹ ವಿಸ್ಮಯಕರವಾದ್ದು.) —ಎಂದು ಆ ಸಂದರ್ಭದಲ್ಲಿ ಮೃದು ಹೃದಯದ ತಂದೆ ಅನುಭವಿಸುವ ಮಿಶ್ರಭಾವದ ವಿಸ್ಮಯವನ್ನು ಸೂಚಿಸುವ ಅರ್ಥವನ್ನು ಹೇಳಬೇಕೇ ಹೊರತು ಹಿತವಚನಗಳನ್ನು ಆದೇಶಗಳೆಂದು ಭಾವಿಸಿ ಅಪನಂಬಿಕೆ

ಯನ್ನು ಸೂಚಿಸುವ "ಹೀಗೆ ನೀನು ನಡೆಯದಿದ್ದರೆ ಒಂದು ಕುಲಕ್ಕೆ ಪೀಡೆಯಾಗುವೆ" ಎಂಬ ಎಚ್ಚರಿಕೆಯ ಮಾತು ಸರ್ವಥಾ ಸಂದರ್ಭೋಚಿತವಲ್ಲ. ಕಣ್ವರು ಜಡತಾಪಸರಲ್ಲ. ಅವರ ಸ್ಥೈರ್ಯವು ಮಾರ್ದವವನ್ನು ಹೇಗೆ ಒಳಗೊಂಡಿದೆ ಯೆಂಬುದನ್ನು ಮಾಸ್ತಿಯವರು "ಗೌತಮಿ ಹೇಳಿದ ಕಥೆ" ಯಲ್ಲಿ ರೂಪಿಸಿದ್ದಾರೆ. ಆದ್ದರಿಂದ ಇಲ್ಲಿ ಪ್ರತೀಪದರ್ಶಿನಿಯರು ಪೀಡೆಗಳು ಎಂದು ಅರ್ಥ ಹೇಳದೆ "ಕೋಮಲೆಯರು" "ಆಧಾರ ಭೂಮಿಗಳು" ಎಂದೇ ಅರ್ಥ ಹೇಳುವುದು ಸಮಂಜಸವೆನಿಸುತ್ತದೆ.

೩

ಕಾಲಿದಾಸನ ಶಾಕುಂತಲದ್ದೇ ಇನ್ನೊಂದು ಪದ್ಯ. ನಾಟಕದ ಭರತವಾಕ್ಯವಾದ —

ಪ್ರವರ್ತತಾಂ ಪ್ರಕೃತಿಹಿತಾಯ ಪಾರ್ಥಿವಃ
ಸರಸ್ವತೀ ಶ್ರುತಿ ಮಹತಾಂ ಮಹೀಯತಾಮ್ ।
ಮಮಾಪಿ ಚ ಕ್ಷಪಯತು ನೀಲಲೋಹಿತಃ
ಪುನರ್ಭವಂ ಪರಿಗತ ಶಕ್ತಿರಾತ್ಮಭೂಃ ॥

ಎಂದಿರುವುದರಲ್ಲಿ ಇಲ್ಲಿಯ "ಪುನರ್ಭವಂ" ಹೇಗೊ ನನ್ನ ನೆನಪಿನಲ್ಲಿ "ಪರಿಭ್ರಮಂ" ಎಂದು ಉಳಿದುಬಿಟ್ಟಿತ್ತು. ನಮ್ಮ ಕಾಲದಲ್ಲಿ ಅಧ್ಯಾಪಕರಾರೋ ಹಾಗೆ ಅದನ್ನು ನುಡಿದಿರಬಹುದು. ಏಕೆಂದರೆ ಆಗ ಕಾವ್ಯಪಾಠಗಳನ್ನು ಹೇಳುವ ಯಾವ ಅಧ್ಯಾಪಕರೂ ಪಠ್ಯಪುಸ್ತಕಗಳನ್ನು ಕೈಯಲ್ಲಿ ಹಿಡಿಯುತ್ತಿರಲಿಲ್ಲ. ಎಲ್ಲವೂ ವಾಚೋ ವಿಧೇಯ. ಕಿವಿಯಿಂದ ಕೇಳಿದ್ದು ನೆನಪಿನಲ್ಲಿ ಉಳಿಯುವಂತೆ ಕಣ್ಣಿಂದ ನೋಡಿದ ಶಬ್ದ ಉಳಿಯುವುದಿಲ್ಲ. ಕಾವ್ಯವು ವಾಚೋವಿಧೇಯವಾಗದೆ ಅದರ ರಸ ಹೃದಯಕ್ಕೆ ಇಳಿಯುವುದಿಲ್ಲ ಎಂಬ ಮಾತು ರಸಿಕರ ಗಮನಸೆಳೆದಿರಬಹುದು. ನಾನು ಶಾಕುಂತಲದ ಒಂದೆರಡು ಬೇರೆ ಬೇರೆ ಮುದ್ರಣದ ಪುಸ್ತಕಗಳನ್ನು ನೋಡಿದರೂ ಎಲ್ಲೆಡೆಯೂ 'ಪುನರ್ಭವಂ' ಕಂಡಿತೇ ಹೊರತು 'ಪರಿಭ್ರಮಂ' ಕಾಣಲೇ ಇಲ್ಲ. ಆದರೆ 'ಪುನರ್ಭವಂ' ಎಂಬ ಮಾತು ನನಗೆ ಹಿಡಿಸಲಿಲ್ಲ. ಕಾರಣವೆಂದರೆ "ಕ್ಷಪಯತು" ಎಂಬ ಕ್ರಿಯಾಪದಕ್ಕೆ "ಪುನರ್ಭವಂ" ಹೊಂದಿಕೆಯಾಗದು. ಪುನರ್ಭವಂ ಎಂಬುದು ಏಕಕಾಲಿಕ ಕ್ರಿಯೆ. "ಕ್ಷಪಯತು" ಎನ್ನುವದು "ಕ್ಷಯಿಸಲಿ" —ಕೆಲಕಾಲ ಸತತ ವಾಗಿ ನಡೆಯುವ ಕ್ರಿಯೆ. ಎಂದರೆ, ಸಂಜೆಯಲ್ಲಿ ಪ್ರಕಾಶವು ಮಂದವಾಗುತ್ತ ಅಳಿಯುವಂತೆ ; ಬೆಳಗಿನಲ್ಲಿ ಅಂಧಕಾರವು ಮೆಲ್ಲಮೆಲ್ಲಗೆ ಹಿಂಜರಿಯುವಂತೆ. ಆದ್ದರಿಂದ ಕ್ಷಪಾ = ರಾತ್ರಿ, ಚಂದ್ರ= ಕ್ಷಪಾನಾಥ. ಅಂದರೆ ಅವನ ಪ್ರಕಾಶ ಕ್ರಮ ವಾಗಿ ಬೆಳೆಯುತ್ತದೆ, ಹಾಗೇ ಇಳಿಯುತ್ತದೆ. "ಪರಿಭ್ರಮಂ" ಎಂಬುದು ಚಕ್ರ ಕ್ರಿಯೆ. ಆ ಕ್ರಿಯೆ ಗಕ್ಕನೆ ನಿಲ್ಲುವುದಿಲ್ಲ. ವೇಗ ಕಡಮೆಯಾಗುತ್ತ, ಆಗುತ್ತ

ನಿಲ್ಲುತ್ತದೆ. ಇಲ್ಲಿ ಹೇಳುವುದು ಏಕಕಾಲದ ಪುನರ್ಜನ್ಮವಲ್ಲ ; ಜನನ ಮರಣಗಳ ಆವರ್ತಕ್ರಿಯೆ. ಇದು ತಿರ್ಯಗ್ಜಂತುಗಳಲ್ಲಿ ವೇಗವಾಗಿ ನಡೆಯುತ್ತದೆ. ಜೀವ ಜಾತಿಗಳು ಉತ್ತಮವಾದಂತೆ ಅವುಗಳ ಆಯುರ್ಮಾನ ದೀರ್ಘವಾಗುತ್ತ ಆವರ್ತ ಕ್ರಿಯೆಯ ವೇಗ ಕಡಮೆಯಾಗುತ್ತದೆ. ಕೊನೆಗೆ ಮನುಷ್ಯೋತ್ತಮನಾಗಿ ಮುಕ್ತನಾದಾಗ ನಿಂತುಹೋಗುತ್ತದೆ. ಆದ್ದರಿಂದ ಇಲ್ಲಿ "ಪುನರ್ಭವಂ" ಎನ್ನುವುದಕ್ಕಿಂತ "ಪರಿಭ್ರಮಂ" ಎಂಬ ಪದವೇ "ಕ್ಷಪಯತು" ಎಂಬ ಕ್ರಿಯಾಪದಕ್ಕೆ ಅನುಕೂಲವಾದದ್ದು. ಕವಿ ಬೇಡಿಕೊಳ್ಳುವುದು "ನಾನು ಈ ಜನನ ಮರಣಗಳ ಪರಿವರ್ತನ ಚಕ್ರಕ್ರಿಯೆಯಲ್ಲಿ ಗಾಸಿಗೊಂಡಿದ್ದೇನೆ. ನೀಲಲೋಹಿತ ನನ್ನಲ್ಲಿ ದಯೆದೋರಿ ಆ ಚಕ್ರವನ್ನು ನಿಲ್ಲಿಸಲಿ" ಎಂದು. ದಾಸರು ಅದನ್ನು "ಮುಕುತಿಪಥಕೆ ಮನವೀವ ಮಹಾರುದ್ರದೇವ" ಎಂದು ಹೇಳುತ್ತಾರೆ. ಆಮೇಲೆ ಮುಕ್ತಿ. ಅದು ಯಾವಾಗಲೂ ಕ್ರಮವಾಗಿ ಬರತಕ್ಕದ್ದು ಹೊರತು ಗಕ್ಕನೆ ಬರಲಾರದು, ಹಾಗೆಂದು 'ಕ್ಷಪಯತು' ಕ್ರಿಯಾಪದ ಹೇಳುವದಿಲ್ಲ. ಆದ್ದರಿಂದ ಇಲ್ಲಿ 'ಪುನರ್ಭವಂ' ಎನ್ನುವದಕ್ಕಿಂತ 'ಪರಿಭ್ರಮಂ' ಪದವೇ ಉಚಿತ.

ರಸಿಕರು, ವಿದ್ವಾಂಸರು ಪ್ರತಿಕ್ರಿಯೆ ತೋರುವ ಕೃಪೆಮಾಡಬೇಕು.

## ಲಿಂಗಸೂಚಕ ಪ್ರತ್ಯಯಗಳು

—ಎಂ. ಜಿ. ವಾರಿ

ಲಿಂಗಸೂಚಕಗಳೆನ್ನುವಂತಹ ಪ್ರತ್ಯೇಕ ಪ್ರತ್ಯಯಗಳೇನಿಲ್ಲ. ಬದಲಾಗಿ ಪುರುಷತ್ರಯದಲ್ಲಿ ಪ್ರಥಮ ಪುರುಷದ ಆಖ್ಯಾತ ಪ್ರತ್ಯಯಗಳೆಲ್ಲ ಲಿಂ.ಸೂ.ಪ್ರ. (ಲಿಂಗ ಸೂಚಕ ಪ್ರತ್ಯಯ) ವಾಗಿಯೂ ಬಳಕೆಯಾಗುತ್ತವೆ.

| | | |
|---|---|---|
| ಪುನ್ ಸೂಚಕ ಏಕವಚನ ಪ್ರತ್ಯಯ | — ಅನ್ | ಮಹತ್ ವರ್ಗದ |
| ಸ್ತ್ರೀ " " " | — ಅಳ್ | ನಾಮಗಳ |
| ಬಹುವಚನದ (ಪುನ್ + ಸ್ತ್ರೀ) ಲಿಂ.ಸೂ.ಪ್ರ. | — ಅರ್[1] | ರಚನೆಯಲ್ಲಿ |
| ನಪ್ ಸೂಚಕ ಏ. ವ. ಪ್ರತ್ಯಯ | — ಉದು[2] | ಅಮಹತ್ ವರ್ಗದ ನಾಮಗಳ |
| ಬಹುವಚನದ ನಪ್ ಲಿಂ.ಸೂ.ಪ್ರ. | — ಉವು | ರಚನೆಯಲ್ಲಿ |

ಈ ಲಿಂ.ಸೂ.ಪ್ರ.ಗಳನ್ನು ಹತ್ತಿಸಿ ಕೃಲ್ಲಿಂಗ[3] ರಚನೆಯನ್ನೂ ಮತ್ತು ಮಹತ್ ವರ್ಗದ ನಾಮಗಳ ಸೃಷ್ಟಿಯನ್ನೂ ಮಾಡಬಹುದಾಗಿದೆ. ಈ ಸಂಗತಿಯನ್ನು ಕೇಶಿರಾಜನು ದೀರ್ಘವಾಗಿಯೇ ಚರ್ಚಿಸಿದ್ದಾನೆ[4].

i) ಕ್ರಿಯಾರ್ಥದ ಮೂಲಕ ಮಹತ್ ಮತ್ತು ಅಮಹತ್ ವರ್ಗದ ನಾಮರಚನೆ.
ಸೂ. 82 — ಬೇಡಿದನ್, ಕೂಡಿದನ್ಗೆ
108 — ಮಾಡಿದರ್, ಬೇಡಿದರ್
163 — ಕೂರಿದನುಂ, ನೇರಿದನುಂ
150 — ನೇರಿದುವು, ತೋಱಿದುವು
120 — ಮಾಡಿದುದಱಿಂ, ಉಣ್ಬುದರ್ಕೆ
—ಧಾತು + ಕಾಲವಾಚಕ ಪ್ರತ್ಯಯ + ಲಿಂ.ಸೂ.ಪ್ರ.

ii) ದಿಗ್ವಾಚಕಗಳಿಂದ ಪುನ್ ಸೂಚಕ ನಾಮ ರಚನೆ.
ಸೂ. 121 — ಮೂಡಣನ್, ತೆಂಕಣನ್
—ದಿಗ್ವಾಚಿ + ಪುನ್ ಸೂ. ಪ್ರ.

iii) ಸ್ಥಳವಾಚಿಗಳಿಂದ ಪುನ್ ಸೂಚಕ ನಾಮ ರಚನೆ.
ಸೂ. 121 — ಒಳಗಣನ್, ಮೇಲಣನ್, ಬಲದನ್, ಇಲ್ಲಿದನ್
—ಸ್ಥಳವಾಚಕ ನಾಮ + ಪುನ್ ಸೂ. ಪ್ರ.

iv) ಸಂಖ್ಯಾ ವಾಚಕಗಳಿಂದ ಮಹತ್ ವರ್ಗದ ನಾಮಗಳ ರಚನೆ
ಸೂ. 108 — ಇರ್ಬರ್, ಸಾಸಿರ್ವರ್
—ಸಂಖ್ಯಾವಾಚಕ + (ಪುನ್ + ಸ್ತ್ರೀ) ಸೂಚಿ ಬ.ವ.ಪ್ರ.

ಏಕವ್ಯಕ್ತಿ ಸೂಚಕವಾಗಿ (ಒರ್ವನ್, ಒರ್ವಳ್) ಅನ್, ಅಳ್—ಪ್ರತ್ಯಯ ಬಳಕೆ ಇತ್ತು. ಇನ್ನು ಎರಡಕ್ಕಿಂತ ಹೆಚ್ಚಿನ ವ್ಯಕ್ತಿಯನ್ನು ಸೂಚಿಸುವ ನಾಮರಚನೆಗಳಲ್ಲೆಲ್ಲ 'ಅರ್' ಪ್ರತ್ಯಯ ಪ್ರಯೋಗಗೊಳ್ಳುತ್ತದೆ.[5]

v) ಸರ್ವನಾಮವನ್ನುಳ್ಳ ಮಹತ್ ಮತ್ತು ಅಮಹತ್ ವರ್ಗದ ನಾಮಗಳ ರಚನೆ
ಸೂ. 108 — ಪೆಱರ್
162 — ಎಲ್ಲರ್, ಆವುದು
—ಸರ್ವನಾಮ + ಲಿಂ.ಸೂ.ಪ್ರ.

vi) ಪ್ರಮಾಣ ವಾಚಕದಿಂದ ಮಹತ್ ವರ್ಗದ ನಾಮ ರಚನೆ
ಸೂ. 109 — ಆನಿಬರ್, ಇನಿಬರ್, ಎನಿಬರ್
—ಪ್ರಮಾಣವಾಚಕ + ಲಿಂ.ಸೂ.ಪ್ರ.

vii) ಗುಣವಾಚಕ ಮುಖೇನ ಮಹತ್ ವರ್ಗದ ನಾಮ ರಚನೆ
ಸೂ. 108 — ಒಳ್ಳಿದರ್, ಬಲ್ಲಿದರ್
163 — ಪಿರಿಯನ್, ಕಿಱಿಯನ್, ತೆಳ್ಳಿದನ್, ಕೂರಿದನ್
164 — ಎಳೆಯಳ್[6], ಪೞೆಯಳ್, ಪೊಸಂಬನ್
171 — ಅಂತಹನ್, ಇಂತಹನ್
ಅನ್ನನ್, ಇನ್ನನ್, ಎನ್ನನ್[7]
—ಗುಣವಾಚಕ + ಲಿಂ.ಸೂ.ಪ್ರ.

ಹೀಗೆ ಕೃಲ್ಲಿಂಗ ರಚನೆ ಮತ್ತು ಉಳಿದ ನಾಮಗಳ ರಚನೆಯಲ್ಲಿ[8] ಈ ಲಿಂ.ಸೂ.ಪ್ರ.ಗಳು ಮುಖ್ಯಪಾತ್ರ ವಹಿಸುತ್ತವೆ. ಒಟ್ಟಾರೆ ಮಹತ್ ವರ್ಗದ ನಾಮಪದಗಳನ್ನು (ವಿರಳವಾಗಿ ಅಮಹತ್ ವರ್ಗದ ನಾಮಗಳನ್ನೂ) ರೂಪಿಸುವುದೇ ಇವುಗಳ ಕಾರ್ಯವಾಗಿದೆ[9].

**ಅಡಿ ಟಿಪ್ಪಣಿಗಳು :**

1. 'ಅರ್' ಪ್ರತ್ಯಯದ ಬಳಕೆಯ ಸ್ವರೂಪ ನಾಲ್ಕು ಬಗೆಯಾಗಿದೆ. i) ಆ.ವಿ.ಪ್ರ.ವಾಗಿ—ಓಡಿದರ್ ii) ಬ.ವ.ಪ್ರ.ವಾಗಿ—ಅರಸರ್, ಕಾಂತೆಯರ್ iii) ಗೌರವ ಸೂ.ಪ್ರ.ವಾಗಿ—ಒಡೆಯರ್, ದೇವರ್, iv) ಲಿಂ.ಸೂ.ಪ್ರ.ವಾಗಿ—ಸಾಸಿರ್ವರ್—ಹೀಗೆ 'ಅರ್' ಪ್ರತ್ಯಯ ಚತುರ್ಮುಖವನ್ನು ಹೊಂದಿದೆ.

2. ‘ಉದು’ ಮತ್ತು ‘ಉವು’ ರೂಪಗಳು ಇಂದು ಲಿಂ.ಸೂ.ಪ್ರ.ವಾಗಿ ಅಷ್ಟೆ ಅಲ್ಲ, ಆ.ಪ್ರ.ವಾಗಿಯೂ ಬಳಕೆಯಲ್ಲಿಲ್ಲ. ಮೈಸೂರು ಉಪಭಾಷೆಯಲ್ಲಿ ಇವು ಆ.ಪ್ರ.ವಾಗಿ ಸ್ವಲ್ಪ ಜೀವವನ್ನು ಹಿಡಿದುಕೊಂಡಿವೆ.

3. ‘ಕೃಲ್ಲಿಂಗ’ ಕುರಿತು ಹೆಚ್ಚಿನ ವಿವರಣೆಗೆ — ನನ್ನ ಲೇಖನ ‘ಲಿಂಗ– ಒಂದು ವಿವೇಚನೆ’ ಸಾಧನೆ ಅಕ್ಟೋ-ಡಿಸೆಂಬರ್ : 1985, ಸಂ. : 14, ಸಂ. : 4

4. ನೇರವಾಗಿ ಇವುಗಳನ್ನೆಲ್ಲ ಕೇಶಿರಾಜ ಲಿಂ.ಸೂ.ಪ್ರ.ವೆನ್ನುವ ಹೆಸರಿನಿಂದ ಕರೆದಿಲ್ಲ. ಅಪರೋಕ್ಷವಾಗಿ ಅವುಗಳ ಕಾರ್ಯನಿರ್ವಹಣೆಯನ್ನು ಉದಾಹರಣೆಗಳ ಮೂಲಕ ಸೂಚಿಸಿದ್ದಾನೆ. ಈ ವಿಷಯವಾಗಿ ಅವನ ವಿಚಾರಗಳು ಹಲವಾರು ಸೂತ್ರಗಳಲ್ಲಿ ಚೆಲ್ಲಾಪಿಲ್ಲಿಯಾಗಿ ಚೆದರಿವೆ. ಇದೇ ರೀತಿ ಹಲವು ವಿಷಯಗಳಲ್ಲಿ ಕೇಶಿರಾಜನ ನಿರೂಪಣೆಯ ವಿಧಾನವೇ ಹಾಗಾಗುತ್ತದೆ.

5. ಹಳಗನ್ನಡದಲ್ಲಿ ಒಂಬತ್ತರ ಸಂಖ್ಯೆವರೆಗೆ (ಮತ್ತು ನೂರು, ಸಾವಿರ ಸಂಖ್ಯೆಗಳಲ್ಲೂ) ಅಂಥ ನಾಮ ರಚನೆ ಸಾಧ್ಯವಿತ್ತು. ಆದರೆ ಹೊಸಗನ್ನಡದ ಗ್ರಾಂಥಿಕ ಭಾಷೆಯಲ್ಲಿ ಐದರ ವರೆಗೆ ಸಂಖ್ಯಾ ನಾಮರಚನೆ ಮಾತ್ರ ಬಳಕೆಯಲ್ಲಿದೆ. ಇಂದಿನ ಇಲ್ಲಿಯ (ಬಾದಾಮಿ ತಾಲೂಕಿನ) ಉಪಭಾಷೆಯಲ್ಲಿ ಒಬ್ಬಾ, ಇಬ್ರು (ಒಬ್ಬನು, ಇಬ್ಬರು) ಮಾತ್ರ ಉಳಿದಿವೆ.

6. ‘ಅಳ್’ ಸ್ತ್ರೀ ಸೂಚಕ ಪ್ರತ್ಯಯವೇನೊ ಹೌದು. ಹಾಗೆಂದು ತದ್ಧಿತ ಪ್ರಕರಣದಲ್ಲಿ ಇದನ್ನು ಸೇರಿಸುವುದರ ಔಚಿತ್ಯವನ್ನು (219—ಕಿಱಿಯಳ್, ಪಿರಿಯಳ್ ರಾಗಿಸಿದಳ್, ಬೆಸೆದಳ್ ಇತ್ಯಾದಿ) ಪ್ರಶ್ನಿಸಬೇಕಾಗುತ್ತದೆ. ವಿವರಗಳಿಗೆ ಗಮನಿಸಿ : ಎಂ.ವಿ.ಸೀ. ಪ್ರಾ.ಕ.ವ್ಯಾಗಳು ಮೊ.ಮು. 1979 ಪು : 189)

ಆದರೆ ಕೆಲವು ತದ್ಧಿತನಾಮುಗಳಿಗೆ ಅನ್ ಮತ್ತು ಅರ್ ಪ್ರತ್ಯಯವಿರದೆ ಪೂರ್ಣ ರೂಪದ ಮಹತ್ ವರ್ಗದ ನಾಮಾರ್ಥವನ್ನು ಹೊಂದಲಾರದು. ಹೀಗೆ ಕೆಲವು ತದ್ಧಿತ ಪ್ರತ್ಯಯದ ನಂತರವೂ ಅನ್, ಅರ್ ಬರುತ್ತದೆ ಎಂದ ಮೇಲೆ ಅಳ್ ಪ್ರತ್ಯಯವೂ ಬರುವುದು ಎಂದಾಯ್ತು ; ಇದರಿಂದ ತದ್ಧಿತ ಪ್ರಕರಣದಲ್ಲಿ ಅದನ್ನ ಪ್ರಸ್ತಾವಿಸಿದರೆ ಅದರಲ್ಲಿ ತಪ್ಪೇನಿದೆ—ಎಂದು ಕೇಶಿರಾಜನ ತಿಳಿವಳಿಕೆ ಇರಬಹುದು. ಇಲ್ಲಿ ಒಂದೆಡೆ ಅನ್, ಅರ್ – ಹತ್ತುವುದು ತದ್ಧಿತ ಪ್ರತ್ಯಯದ ನಂತರ – ಎಂಬುದು (ಅನಿತನೆಯ+ ಅನ್, ಮೂಱನೆಯ+ಅನ್, ಕಂಚುಗಾಱ+ಅರ್ ಇತ್ಯಾದಿ) ಇಲ್ಲಿ ಗಮನಿಸಬೇಕಾದ್ದು. ಹೀಗೆ ಬಂದಾಗಲೂ ಅವು ಲಿಂಗಸೂಚಕ ಪ್ರತ್ಯಯಗಳಾಗೇ ನಿಲ್ಲುತ್ತವೆ. ಕಾರಣ ತದ್ಧಿತ ಪ್ರಕರಣದಲ್ಲಿ ಅದರ ಪ್ರಸ್ತಾವ ಅಗತ್ಯವಿರಲಿಲ್ಲ.

7. (i) (ಅಂತಪ್ಪ) ಅಂತಹ, (ಇಂತಪ್ಪ) ಇಂತಹ, (ಎಂತಪ್ಪ) ಎಂತಹ —ಎನ್ನುವ ರೂಪಗಳು ಒಂದು ರೀತಿಯ ಸ್ವಭಾವ ಇಲ್ಲವೆ ಬಾಹ್ಯ ಸ್ವರೂಪ ಚಿತ್ರದತ್ತ ತೋರುಬೆರಳಾಗಿ ನಿಲ್ಲುವುದರಿಂದ ಇವನ್ನು ವಿಶೇಷಣಗಳೆಂದೇ ಅನ್ನಬೇಕು. ಇವುಗಳಿಗೆ ಲಿಂ.ಸೂ.ಪ್ರ. ಹತ್ತಿಸಿದಾಗ ಮಹತ್ ವರ್ಗದ ನಾಮಗಳಾಗುತ್ತವೆ. ಹಾಗೆಯೆ ಅನ್ನನ್, ಇನ್ನನ್, ಉನ್ನನ್, ಎನ್ನನ್—ರೂಪಗಳೂ ಮೇಲಿನ ಅರ್ಥದೊಂದಿಗೆ ಸಮಾನವಾಗಿ ಬಳಕೆಯಾಗುತ್ತವೆ. ಆದರೆ ಅಂತಹನ್, ಇಂತಹನ್, ಎಂತಹನ್—ಈ ರೂಪಗಳಿಂದ ಅನ್ನನ್, ಇನ್ನನ್, ಎನ್ನನ್—ಎಂಬುವು ನಿಷ್ಪನ್ನಗೊಳ್ಳುತ್ತವೆ ಎಂದು ಕೇಶಿರಾಜ ಹೇಳಿದ್ದಾನೆ. ಇದು ಸರಿಯಲ್ಲ. (ಈ ಸಂಗತಿಯನ್ನು ಕೆ. ಕುಶಾಲಪ್ಪಗೌಡರು ಸೂಚಿಸಿದ್ದಾರೆ ; ನೋಡಿ—ಕ. ಭಾ. ಮತ್ತು ವ್ಯಾ.ಗಳ ಒಂ.ಅ.—1986. ಪ್ರ.ಮು., ಮೈ.ವಿ.ವಿ. ಪ್ರಸಾರಾಂಗ ಪುಟ : 204) ಜೊತೆಗೆ ಅಂತಹನ್ ಮತ್ತು ಅನ್ನನ್—ಇವೆರಡೂ ಸೂಚಿಸುವ ಭಾವ ನಿಬಿಡತೆಯಲ್ಲಿ ಅಂತರವೂ ಕಾಣಿಸುತ್ತದೆ. ಅನ್ನನ್-ಎಂಬುದು 'ಅಂತಹನ್ ಗಡಾ-!' ಎಂಬ ಆಶ್ಚರ್ಯ ಮತ್ತು ಪ್ರಶ್ನಾರ್ಥಕ ಭಾವಸೂಚಿಯಾಗಿ ನಿಲ್ಲುತ್ತದೆ—ಎಂದು ಕೇಶಿರಾಜನೇ ಸೂಚಿಸಿದ್ದಾನೆ. ಇಲ್ಲಿ ಮಾತನಾಡುವ ವ್ಯಕ್ತಿ ಭಾವದ ಸ್ವರೂಪವನ್ನು ಸೂಚಿಸುತ್ತದೆ. ಆದರೆ ಅನ್ನನ್, ಇನ್ನನ್—ಎಂದು ಸಂಬೋಧಿಸಲ್ಪಡುವ ವ್ಯಕ್ತಿಯೇ ಇಡಿಯಾಗಿ ಆ (?) ಸ್ವಭಾವ ಲಕ್ಷಣದಲ್ಲಿ ಸೇರಿಹೋಗಿರುತ್ತಾನೆ—ಎಂಬ ಅಭೇದ ಸಂಬಂಧ ಸಂಭವಿಸುವುದನ್ನೂ ಸೂಚಿಸುತ್ತದೆ. ಇದನ್ನು ಕಿಟ್ಟೆಲ್ಲರು ತಿಳಿಸಿಯೂ ಇದ್ದಾರೆ. "He gives the following instances in which the genitive precedes 'ಅನ್ನಂ', etc, ಪುಟ : 188. AES Reprint : 1982.

—A grammar of the Kannada Language

(ii) ಮನದನ್ನಳ್, ಮನದನ್ನೆ, ಮನದನ್ನನ್—ಈ ಶಬ್ದಗಳಲ್ಲಿ ಅನ್ನನ್, ಅನ್ನಳ್ ರೂಪಗಳು ಬಳಕೆ ಇದ್ದರೂ ನಿರ್ಭಾವ ಸ್ವರೂಪವೊಂದಿಗೆ ಅಂಥವಳು, ಅಂಥವನು ಎಂಬರ್ಥ ಸೂಚಿಸುತ್ತದೆ.

**ಉದಾ :** 'ಸರ್ತಿಸಿದಳು ನಲಿವಳು ಮನದನ್ನನ ಮೂರ್ತಿಯ ವಿಮಲ ಸದ್ಗುಣವ ಕೀರ್ತಿಸುತಾ'.

—**ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ**

8. ಈ ಕೃಲ್ಲಿಂಗದಿಂದ ಲಿಂ.ಸೂ.ಪ್ರ.ವನ್ನು ಕಳಚಿದರೆ ಉಳಿದ ರೂಪ ಅಪೂರ್ಣ ಕ್ರಿಯಾಪದ ಎನಿಸಿಕೊಳ್ಳುತ್ತದೆ. ಆದರೆ ಉಳಿದ ಮಹತ್ ವರ್ಗದ ನಾಮಗಳಿಗೆ ಪ್ರತ್ಯಯವನ್ನು ಕಳಚಿದಾಗ ಆ ಭಾಗ ನಾಮಪದವಾಗಿಯೇ ಉಳಿಯುತ್ತದೆ.

9. ಈ ಎಲ್ಲ ಪ್ರತ್ಯಯಗಳು ಆ.ಪ್ರ.ಗಳಾದರೂ ನಿರ್ದಿಷ್ಟಪಡಿಸಿದ ಕಾರ್ಯ (ಮಹತ್ ಇಲ್ಲವೆ ಅಮಹತ್ ವರ್ಗ ನಾಮರಚನೆಯಲ್ಲಿ) ಗಳಲ್ಲಿ ಸಮಾನ ರೀತಿ ಸಹಭಾಗಿಗಳಾಗಿರುವುದರಿಂದ ಇವನ್ನು ಲಿಂ.ಸೂ.ಪ್ರ.ವೆಂದು ಕರೆಯಲಾಗಿದೆ. ಈ ತನಕದ ಅವಲೋಕನದಿಂದ ಈ ಅಂಶ ಮನದಟ್ಟಾಗುತ್ತದೆ. 'ಅನ್' ಮತ್ತು 'ಅಳ್' ಇವನ್ನು ಪರಿಷತ್ತಿನ ನಿಘಂಟಿನಲ್ಲಿ ಲಿಂಗಸಾಧಕ ಪ್ರತ್ಯಯಗಳು ಎನ್ನಲಾಗಿದೆ. ಈ ಹೆಸರು ಒಂದು ರೀತಿ ಅವುಗಳ ಈ ಮುಖದ ಕಾರ್ಯಸ್ವರೂಪವನ್ನು ನಿಚ್ಚಳವಾಗಿ ಪ್ರತಿ ಬಿಂಬಿಸುತ್ತದೆ. ಅನ್, ಅಳ್ ಇವೆರಡಕ್ಕಷ್ಟೆ ಅಲ್ಲ. ಪ್ರಥಮ ಪುರುಷದ ಪ್ರತ್ಯಯ ಗಳೆಲ್ಲವನ್ನೂ ಲಿಂ.ಸಾ.ಪ್ರ.ಗಳೆಂದು ಕರೆಯುವುದು ಇನ್ನೂ ಸೂಕ್ತವೆನಿಸುತ್ತದೆ.

---

# ಗ್ರಂಥ ವಿಮರ್ಶೆ

**ಕನ್ನಡ ಸಾಹಿತ್ಯದಲ್ಲಿ ದ್ರೌಪದಿ:** ಡಾ||ಪ್ರಭಾವತಿಯವರು ಪಿ.ಎಚ್.ಡಿ.ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಮಹಾ ಪ್ರಬಂಧ 'ಕನ್ನಡ ಸಾಹಿತ್ಯದಲ್ಲಿ ದ್ರೌಪದಿ' ಈಗ ಪುಸ್ತಕ ರೂಪವಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಪ್ರಕಟವಾಗಿರುವುದು ಸಂತೋಷದ ಸಂಗತಿ. ಈ ಪುಸ್ತಕವು ವಿಮರ್ಶೆಗೆಂದು ನನ್ನ ಕಡೆಗೆ ಬಂದಿರುವುದು, ವ್ಯಕ್ತಿಗತವಾಗಿ ನನಗೆ ಲಾಭದಾಯಕವೆನಿಸಿದೆ. 'ಮಹಾಭಾರತ'ದ ಪ್ರಸ್ತಾಪದೊಂದಿಗೆ ತತ್‌ಕ್ಷಣಕ್ಕೆ ನಮಗೆ ಎದುರಾಗಿ ನಿಲ್ಲುವುದು ದ್ರೌಪದಿಯ ಪಾತ್ರವೇ ಆದರೂ, ಮಹಾಭಾರತದ ಸನ್ನಿವೇಶಗಳನ್ನೋ ಇಲ್ಲವೇ ಇಡೀ ಮಹಾಭಾರತವನ್ನೋ ತಮ್ಮ ಕಾವ್ಯ ಗ್ರಂಥಗಳ ವಸ್ತುವಾಗಿಸಿಕೊಂಡ ಕವಿಗಳು 'ದ್ರೌಪದಿ'ಯನ್ನು ವೈಯಕ್ತಿಕ ಮನೋಧರ್ಮ, ದೃಷ್ಟಿಕೋನಗಳಿಂದ ನೋಡುವುದರ ಜೊತೆಗೆ ತಮ್ಮ ಕಾವ್ಯಾಶಯಗಳ ನಿರೂಪಣೆಗೆ ಅನುಗುಣವಾಗಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ಇಂತಹ ಸಂದರ್ಭಗಳಲ್ಲಿ 'ದ್ರೌಪದಿ'ಯು ಬಗೆಗಿನ ಸಾಂಪ್ರದಾಯಿಕ ನಿಲುವುಗಳು ಒಂದಕ್ಕಿಂತ ಒಂದು ಭಿನ್ನವಾಗಿ, ದ್ರೌಪದಿಯ ಮೂಲ ವ್ಯಕ್ತಿತ್ವ, ಭಿನ್ನಾಭಿಪ್ರಾಯಗಳ ನಡುವೆ ಎಲ್ಲೋ ಒಂದು ಕಡೆ ಅಡಗಿರುವುದು ಸ್ವಾಭಾವಿಕವಾಗುತ್ತದೆ. ಹರಿದು ಹಂಚಿ ಹೋಗಿರಬಹುದಾದ ಅವಳ ವ್ಯಕ್ತಿತ್ವದ ಜಾಡನ್ನು ಹಿಡಿದು ನಡೆದು ಒಂದು ಸಮಗ್ರ ವ್ಯಕ್ತಿತ್ವದ ಸರಿಯಾದ ದರ್ಶನವನ್ನು ರೂಪಿಸಿ ನೀಡುವುದು ಸಂಶೋಧಕರಿಗೆ ಅನಿವಾರ್ಯವಾಗುತ್ತದೆ. ಅಂತಹ ಒಂದು ಕೆಲಸವನ್ನು ಡಾ|| ಪ್ರಭಾವತಿಯವರು ಮಾಡಿದ್ದಾರೆ.

ಒಂದು ಲಕ್ಷಕ್ಕೂ ಹೆಚ್ಚು ಶ್ಲೋಕಗಳನ್ನು ಒಳಗೊಂಡ ಬೃಹತ್‌ಕಾವ್ಯವಾದ ಮಹಾಭಾರತ ಇಡೀ ಭಾರತದಲ್ಲಿ, ಸತ್ಯಾಸತ್ಯ, ಧರ್ಮಾಧರ್ಮ, ನ್ಯಾಯಾನ್ಯಾಯಗಳ ನಡುವಿನ ಹೋರಾಟವನ್ನೂ, ಧರ್ಮಕ್ಕೇ, ಸತ್ಯಕ್ಕೇ ಕೊನೆಗೆ ಜಯವಿದೆ— ಎಂಬ ಸಂದೇಶವನ್ನೂ ಪ್ರತಿನಿಧಿಸುವ ಧಾರ್ಮಿಕ ಕಾವ್ಯವಾಗಿದೆ. ಅದರ ಬಗ್ಗೆ ಇರುವ ಅತೀವ ಧಾರ್ಮಿಕ ಶ್ರದ್ಧೆಯೇ ಅಸಂಖ್ಯಾತ ಪ್ರಕ್ಷೇಪಗಳಿಗೆ ದಾರಿಮಾಡಿ ಮೂಲ ಸ್ವರೂಪವನ್ನೇ ಕೆಲವೆಡೆ ತಿರುಚಿಹಾಕಿರುವುದರಿಂದ ಕಾವ್ಯಾಭ್ಯಾಸಿಗಳಿಗೆ ಒಂದು ಸವಾಲಾಗಿದೆ.

ಪ್ರಭಾವತಿಯವರು ಸುಕ್ತಂಕರರ ಸಂಸ್ಕೃತ ಮಹಾಭಾರತವನ್ನು ಮೂಲ ಪಾಠವೆಂದು ಸ್ವೀಕರಿಸಿ. ಅದರಲ್ಲಿನ ವಿಷಯಗಳ ಪ್ರಾಮಾಣ್ಯದೊಂದಿಗೆ, ಸಂಸ್ಕೃತ, ಕನ್ನಡ

---

* ಕನ್ನಡ ಸಾಹಿತ್ಯದಲ್ಲಿ ದ್ರೌಪದಿ – ಡಾ|| ಎಚ್. ವಿ. ಪ್ರಭಾವತಿ, ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 1992, ಪು : 159 ಬೆಲೆ : 31-00

ಕಾವ್ಯಗಳಲ್ಲಿನ ಕಥಾವಿವರಗಳನ್ನು ಹೋಲಿಸುತ್ತಾ ನಿರ್ಣಯಾತ್ಮಕ ಅಭಿಪ್ರಾಯ ಗಳನ್ನು ತಲುಪುತ್ತಾರೆ. ಸುಕ್ತಂಕರರ ಮೂಲಪಾಠದ ಜೊತೆಗೆ ಗೋರಖ್‌ಪುರ್ ಪ್ರೆಸ್‌ನ ಪ್ರಕಟಣೆಯನ್ನೂ ಗಮನಿಸಿರುವುದರಿಂದ ಕೆಲವು ವಿಚಾರಗಳಿಗೆ ಅಧಿಕೃತತೆ ಯನ್ನು ತಂದೊಡ್ಡಿದ್ದಾರೆ. ಮೂಲಕಥಾ ವಿವರಗಳಲ್ಲಿ ಅಷ್ಟೊಂದು ವ್ಯತ್ಯಾಸಗಳಿಲ್ಲ ದಿದ್ದರೂ, ದ್ರೌಪದಿಯ ಜನನ, ತಂದೆ-ತಾಯಿಗಳ ಹೆಸರು, ಸ್ವಯಂವರದ ವರ್ಣನೆ, ಪಂಚಪತಿತ್ವ, ಜೂಜು, ವಸ್ತ್ರಾಪಹರಣ, ಅಕ್ಷಯವಸ್ತ್ರ — ಮುಂತಾದ ಸನ್ನಿವೇಶಗಳಲ್ಲಿ ಆಗಿರುವ ಮಾರ್ಪಾಟುಗಳನ್ನು ತಾರ್ಕಿಕವಾಗಿ ಚರ್ಚಿಸಿದ್ದಾರೆ.

ಮುಖ್ಯವಾಗಿ ಮಹಾಭಾರತಕ್ಕೆ ಇರುವ ಔತ್ತರೇಯ, ದಾಕ್ಷಿಣಾತ್ಯ ಪಾಠಾಂತರ ಗಳಲ್ಲಿ (ಪುಣೆಯ ಭಂಡಾರ್‌ಕರ್ ಸಂಸ್ಥೆ ಪ್ರಕಟಿಸಿರುವ ಮಹಾಭಾರತದ) ಔತ್ತರೇಯ ಪಾಠಗಳಲ್ಲಿ ಕಂಡುಬಾರದಿರುವ ಭಾಗಗಳನ್ನು ದಾಕ್ಷಿಣಾತ್ಯ ಪಾಠಗಳಲ್ಲಿ ಗುರುತಿಸಿ ಪ್ರಕ್ಷೇಪಕಾರರಿಂದಾಗಿ, 'ನೀತಿಬೋಧಕ ವಾಕ್ಯಗಳು, ಪದಾರ್ಥ ಅಥವಾ ವಿವಾಹ, ಸ್ತ್ರೀವರ್ಣನಾದಿ ಭಾಗಗಳಲ್ಲಿ ದಾಕ್ಷಿಣಾತ್ಯ ಪಾಠ ಒಂದಕ್ಕೆ ನಾಲ್ಕರಷ್ಟು ಹಿಂಜಿರುತ್ತದೆ' ಎಂದು ಅಭಿಪ್ರಾಯಪಡುತ್ತಾರೆ.

ಪಂಚಪತಿತ್ವದ ವಿಚಾರವಾಗಿ, ಮೂಲ ಮಹಾಭಾರತ ಕಾಲಕ್ಕೆ ಪಂಚಪತಿತ್ವ ಪದ್ಧತಿಯಿದ್ದು, ಕೃತಿ ರೂಪಕ್ಕೆ ಅದು ಇಳಿಯುವ ಕಾಲಕ್ಕೆ, ಅದರ ವಿಚಾರವಾಗಿ ಸಾಮಾಜಿಕ ಪುರಸ್ಕಾರ ಇಲ್ಲದ ಕಾರಣಕ್ಕಾಗಿ ಕಥೆ ತಿರುಚಿ ಹೋಗಿರಬೇಕು. ಪ್ರಕ್ಷಿಪ್ತ ಭಾಗಗಳು, ದ್ರೌಪದಿ ಸ್ವಇಚ್ಛೆಯಿಂದ ಪಂಚ ಪತಿತ್ವವನ್ನು ಸ್ವೀಕರಿಸಲಿಲ್ಲವೆಂದೂ, ಪಂಚ ಪತಿತ್ವದ ವರ ಪಡೆದ ಋಷಿಕನ್ಯೆಯೊಬ್ಬಳು ದ್ರೌಪದಿಯಾಗಿ ಜನಿಸಿ ಪಂಚ ಪತಿಗಳನ್ನು ಪಡೆದಳೆಂದು—ವಿವರಿಸಿರುವುದರ ಹಿಂದೆ, ಈ ಪದ್ಧತಿಯ ಬಗೆಗಿನ ಸಾಮಾಜಿಕ ನಿಲುವನ್ನು ಗುರುತಿಸಿದ್ದಾರೆ. ದ್ರೌಪದಿಯ ಪಾತ್ರದ ಅಧ್ಯಯನದ ಜೊತೆ ಜೊತೆಗೆ ಅನೇಕ ಸಾಮಾಜಿಕ, ಸಾಂಸ್ಕೃತಿಕ ಮೌಲ್ಯಗಳ ಕಡೆ ದೃಷ್ಟಿ ಹರಿದಿದೆ. ಒಬ್ಬ ಗಂಡಸಿಗೆ ಅನೇಕ ಹೆಂಡಿರಿದ್ದು 'ಬಹು ಪತ್ನಿತ್ವ' ಒಪ್ಪಿದ ಮೌಲ್ಯವಾಗಿತ್ತಾದರೂ ಬಹುಪತಿತ್ವವಾಗಲೀ ಪಂಚಪತಿತ್ವವಾಗಲೀ ಸಾಮಾಜಿಕವಾಗಿ ಸ್ವೀಕೃತವಾಗಿರಲಿಲ್ಲ ವೆಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಇದಕ್ಕಾಗಿ, ಇದರ ಸಮರ್ಥನೆಗಾಗಿ ಗ್ರಂಥ ಗಳಿಂದ ಉದ್ಧೃತಿಗಳನ್ನು ಸೂಚಿಸುತ್ತಾರೆ. "ಅಯ್ಯಾ ಕೌಂತೇಯ, ಒಬ್ಬನಿಗೆ ಅನೇಕ ಹೆಂಡಿರುಂಟು, ಒಬ್ಬಳಿಗೆ ಅನೇಕ ಗಂಡಂದಿರು ಎಲ್ಲಿಯಾದರೂ ಉಂಟೇ?"—ಎಂಬ ದ್ರುಪದನ ಪ್ರಶ್ನೆ ಪಂಚಪತಿತ್ವದ ಬಗೆಗಿನ ಸಾಮಾಜಿಕ ನಿಲುವನ್ನು ಸ್ಪಷ್ಟ ಪಡಿಸುತ್ತದೆ.

ಜೂಜು, ವಸ್ತ್ರಾಪಹರಣ, ಅಕ್ಷಯ ವಸ್ತ್ರ—ಸಂಬಂಧವಾಗಿ ವಿವರಗಳನ್ನು ಸಂದರ್ಭ ಸಹಿತವಾಗಿ ನೀಡಿದ್ದಾರೆ. 'ಅನುದ್ಯೂತ ಮೂಲ ಮಹಾಭಾರತದ್ದೇ ಆದರೂ ನೋಡುವುದಕ್ಕೆ ಕೃತಕವೆನಿಸುವುದರಿಂದ ಮುಂದಿನ ಕನ್ನಡ ಕವಿಗಳು ಅದನ್ನು

ಕೈಬಿಟ್ಟಿದ್ದಾರೆ' ಎಂದು ನಿರ್ಣಯವನ್ನು ತಲುಪುವುದರೊಂದಿಗೆ, ಜೂಜಾಟ ನಡೆದಾಗ ಪ್ರಾತಿಕಾಮಿ ಎರಡು ಬಾರಿ ದ್ರೌಪದಿಯನ್ನು ಕರೆಯುವುದು, ದ್ರೌಪದಿ ಬಂದಳೆಂದು ಹೇಳಿ ಅನಂತರ ಮತ್ತೆ ದುರ್ಯೋಧನನು ದ್ರೌಪದಿಯನ್ನು ಕರೆತಾ ಎಂದು ದುಶ್ಶಾಸನನಿಗೆ ಹೇಳುವುದು ಇತ್ಯಾದಿ ಪ್ರಕ್ಷೇಪಕಾರರಿಂದ ಸೇರ್ಪಡೆಯಾದುದೆಂದು ಸಂದೇಹಿಸುತ್ತಾರೆ.

ಮೂಲ ಮಹಾಭಾರತದಲ್ಲಿ, ದ್ರೌಪದಿಯ ವಸ್ತ್ರಾಪಹರಣ ಅತ್ಯಂತ ಸಶಕ್ತವಾಗಿ ಸಂಕ್ಷೇಪವಾಗಿ ಬಂದಿದೆ. ದ್ರೌಪದಿಯ ಸೀರೆ ಸೆಳೆದಾಗ ಅದೇ ಬಗೆಯ ಅನೇಕ ವಸ್ತ್ರಗಳು ಬಂದುದು ಅದ್ಭುತವೆನಿಸಿದ್ದನ್ನು, ಮುಂದೆ ಬಂದವರು ಇಂತಹ ಅದ್ಭುತಕ್ಕೆ ದೈವೀಕಾರಣವನ್ನು ಸ್ಥಾಪಿಸುವುದಕ್ಕಾಗಿ, ದ್ರೌಪದಿ ಕೃಷ್ಣನನ್ನು ಪ್ರಾರ್ಥಿಸಿದಂತೆ, ಅದಕ್ಕೇ ಅನೇಕ ವಸ್ತ್ರಗಳು ಅಕ್ಷಯವಾದಂತೆ ರೂಪಾಂತರಗೊಂಡಿದೆ. ಈ ಪ್ರಸಂಗ ಪ್ರಕ್ಷೇಪವಲ್ಲದಿದ್ದರೂ, ಅದರ ವರ್ಣನೆಯಲ್ಲಿ ಭಿನ್ನತೆಯಿದೆ. ಮುಂದೆ ವೈಷ್ಣವ ಮತ ಪ್ರಚುರವಾದ ಅವಧಿಯಲ್ಲಿ ಕೃಷ್ಣಪಾರಮ್ಯವನ್ನು ಕೊಂಡಾಡಲು, ತೋರಲು, ಇದೊಂದು ಅದ್ಭುತ ಅವಕಾಶವನ್ನು ಭಕ್ತ ಕವಿಗಳಿಗೆ ಕಲ್ಪಿಸಿಕೊಟ್ಟಿದ್ದರಲ್ಲಿ ಸಂದೇಹ ವಿಲ್ಲವೆನ್ನುತ್ತಾರೆ.

ಪ್ರಭಾವತಿಯವರು ಒಂದೊಂದು ಪರ್ವದಲ್ಲಿಯೂ ಆಗಿರುವ ವ್ಯತ್ಯಾಸಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದಾರೆ. ಕಥಾವಿವರಗಳಲ್ಲಿನ ಬದಲಾವಣೆಗಳು ದ್ರೌಪದಿಯ ಪಾತ್ರದ ಮೇಲೆ ಬೀರಿರುವ ಪ್ರಭಾವಗಳನ್ನು ಗುರುತಿಸುವುದನ್ನೂ ಮುಖ್ಯ ಆಶಯವಾಗಿ ಒಳಗೊಂಡಿದ್ದಾರೆ.

ಮಹಾಭಾರತದ ನಂತರ ಬಂದ ಸಂಸ್ಕೃತ, ಕನ್ನಡ, ಕವಿ ನಾಟಕಕಾರರು ತಾವು ತೆಗೆದುಕೊಂಡ ಮಹಾಭಾರತ ಪ್ರಸಂಗಗಳಲ್ಲಿ ವಸ್ತ್ರಾಪಹರಣ ಪ್ರಸಂಗವನ್ನು ಸೇರಿಸಿದ್ದರೂ, 'ಅಕ್ಷಯ ವಸ್ತ್ರ'ದ ಬಗ್ಗೆ ಮೌನವಹಿಸಿರುವುದನ್ನು, ಅದು ಭಾರತೀಯ ಸಂಸ್ಕೃತಿಗೆ ಒಪ್ಪುವ ವಿಷಯವಲ್ಲವೆನಿಸಿರುವುದೇ ಕಾರಣವಿರಬೇಕೆಂದು ತರ್ಕಿಸುತ್ತಾರೆ.

ವನವಾಸಾವಧಿಯಲ್ಲಿ ಬರುವ ದೂರ್ವಾಸಾತಿಥ್ಯ, ಜಂಬೂಫಲ, ದ್ರೌಪದೀ ಹರಣ — ಮೂಲ ಮಹಾಭಾರತದಲ್ಲಿಲ್ಲದ ಪ್ರಸಂಗಗಳೆಂದು ಗುರುತಿಸುತ್ತಾರೆ.

ಹೀಗೆಯೇ ವಿರಾಟ ಪರ್ವ, ಉದ್ಯೋಗ ಪರ್ವ ಮುಂತಾದ ಎಡೆಗಳಲ್ಲಿ ಕಥಾ ವಿವರಗಳಲ್ಲಿನ ವೈದೃಶ್ಯಗಳನ್ನು ಗಮನಿಸುತ್ತಾ ದ್ರೌಪದಿಯ ವ್ಯಕ್ತಿತ್ವ ಚಿತ್ರಣದಲ್ಲಿನ ವೈರುಧ್ಯಗಳನ್ನು ಪತ್ತೆಹಚ್ಚಿ ವಿಶ್ಲೇಷಣೆಗೆ ತೊಡಗುತ್ತಾರೆ. ಯುದ್ಧಾನಂತರ ಮಕ್ಕಳನ್ನು ಕಳೆದುಕೊಂಡು ದುಃಖಾತಿರೇಕದಲ್ಲಿ ವೈರಾಗ್ಯದ ಮಾತನಾಡುವ ದ್ರೌಪದಿ, ಧರ್ಮರಾಯನ ಎದುರು, ಕಳವಳಕ್ಕೆ ಈಡಾದ ಅವನ ಮನಸ್ಸಿಗೆ ಧೈರ್ಯ ತುಂಬುವ

ರೀತಿಯ ಮಾತುಗಳು 'ದ್ವಂದ್ವ' ಸ್ವಭಾವವನ್ನು ಸಾರುತ್ತವೆ. ಇಂತಹ 'ದ್ವಂದ್ವ' ಗಳೊಳಗಿಂದಲೇ ಅವಳ ಸಹಜ ಸ್ವಭಾವ ವ್ಯಕ್ತಿತ್ವವನ್ನು ರೂಪಿಸುವ ಪ್ರಯತ್ನದ ಫಲವಾಗಿ "ಪಾಂಡವರ ಜೊತೆಗೆ ಹೆಂಗಸರಲ್ಲಿ ದ್ರೌಪದಿಯೊಬ್ಬಳೇ ಸತ್ತು ಸ್ವರ್ಗಕ್ಕೆ ಹೋದಳೆಂದು ತೋರುತ್ತದೆ. ಅವಳು ಯುದ್ಧದಲ್ಲಿ ಕಾದದೆ ಇದ್ದರೂ ಕಾದಿದವರನ್ನು ಉಸಿರಾಡುವುದಕ್ಕೆ ಅವಕಾಶವಿಲ್ಲದಂತೆ ಪ್ರೇರಿಸಿದವಳು, ಮೂದಲಿಸಿದವಳು, ಹಠ ಮಾಡಿದವಳು, ಅವಳು ಪಟ್ಟ ಕಷ್ಟ ನಿಷ್ಠುರಗಳೂ ಹಾಗೇ ಇದ್ದವು. ಕುಂತಿ, ಅಂಬೆ ಅಂಬಾಲಿಕೆಯರೂ ಕಷ್ಟಪಟ್ಟರು. ಆದರೆ ಅವರು ಯಾರದ್ದೂ ಅಷ್ಟು ಆರ್ಭಟವಿಲ್ಲ. ಅವರು ಯಾರೂ ಅಷ್ಟು ರಾಜಸರಲ್ಲ, ಅವಳು ಕಾದಿ ಮಡಿಯದೆ ಇದ್ದರೂ ಗಂಡಂದಿರ ಜೊತೆಯಲ್ಲಿ ವೀರ ಸ್ವರ್ಗವನ್ನು ಅನುಭವಿಸಿದಳೆಂದು ತೋರುತ್ತದೆ. ಮಿಕ್ಕ ಹೆಂಗಸರಿಗೆ ಬೆಂಕಿ, ಇಲ್ಲ ಕಾಡು— ಇವೇ ಕೊನೆ"—ಎಂದು ಮೂಲ ಮಹಾಭಾರತದ ಮೂಲಕ ದ್ರೌಪದಿಯ ಸಮಗ್ರ ವ್ಯಕ್ತಿತ್ವವನ್ನು ನಿರೂಪಿಸುತ್ತಾರೆ.

ಒಂಬತ್ತು ಅಧ್ಯಾಯಗಳ ಅಡಿಯಲ್ಲಿ ಸಂಸ್ಕೃತ ನಾಟಕಕಾರರಾದ ಭಾಸ, ಭಾರವಿ, ಭಟ್ಟನಾರಾಯಣ, ಕ್ಷೇಮೇಂದ್ರ ಮುಂತಾದವರು ತಮ್ಮ ತಮ್ಮ ಕೃತಿಗಳಲ್ಲಿ ದ್ರೌಪದಿಯನ್ನು ಚಿತ್ರಿಸಿರುವ ರೀತಿ, ಕನ್ನಡ ಕವಿಗಳಲ್ಲಿ ಮುಖ್ಯರಾದ ಪಂಪ, ರನ್ನ, ಕುಮಾರವ್ಯಾಸ, ಮೊದಲಾದವರು, ಕೀರ್ತನೆಗಳಲ್ಲಿ 'ದ್ರೌಪದಿ'ಯನ್ನು ದಾಸರು ಪ್ರಸ್ತಾವಿಸಿರುವುದನ್ನು ಅಲ್ಲದೆ ಜನಪದ ಕಾವ್ಯ, ಆಧುನಿಕ ಸಾಹಿತ್ಯದಲ್ಲಿ ದ್ರೌಪದಿ ಯನ್ನು ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. ಭಟ್ಟನಾರಾಯಣನ ವೇಣೀ ಸಂಹಾರದಲ್ಲಿ ಬಿಟ್ಟರೆ, ಮಿಕ್ಕವರಿಗೆ ದ್ರೌಪದಿ ಪ್ರಮುಖ ಪಾತ್ರವಲ್ಲ. ನಾಟಕಗಳಲ್ಲಿ, ತಾವು ಆರಿಸಿಕೊಂಡಿರುವ ಪ್ರಸಂಗಗಳಲ್ಲಿ ದ್ರೌಪದಿ ಕಾಣಿಸಿಕೊಳ್ಳುವುದೇ ಇಲ್ಲ. ಕನ್ನಡ ಕವಿಗಳು ಸಂಸ್ಕೃತದ ನಾಟಕಕಾರರಿಂದ ಪ್ರಭಾವಿತರಾಗಿ ಆಯಾ ಪ್ರಸಂಗಗಳನ್ನು ತಮ್ಮ ಕಾವ್ಯಗಳಲ್ಲಿ ಪ್ರವೇಶ ಪಡಿಸಿದ್ದಾರೆ. 'ಕನ್ನಡ ಗದಾಯುದ್ಧ'ದ ಮೊದಲನೇ ಅಧ್ಯಾಯ, ವೇಣೀ ಸಂಹಾರದ ಮೊದಲ ಅಂಕದಿಂದ ಸಂಪೂರ್ಣ ಪ್ರೇರಿತ ವೆನ್ನುತ್ತಾರೆ. ಪಂಪನಲ್ಲಿ, ದುರ್ಯೋಧನ, ವೇಣೀಸಂಹಾರದಲ್ಲಿ ಕಾಣುವುದಕ್ಕಿಂತ ಭಿನ್ನನಾಗಿ, ಉದಾತ್ತೀಕರಣಗೊಂಡಿದ್ದಾನೆಂದು ಅಭಿಪ್ರಾಯ ಪಡುತಾರೆ.

ಜೈನನಾದ ಪಂಪ, ತನ್ನ ಮತೀಯ ದರ್ಶನಕ್ಕೆ ಹೊಂದಿಕೊಳ್ಳುವಂತೆ ಕಥಾ ವಿವರಗಳನ್ನು ಮಾರ್ಪಡಿಸಿಕೊಂಡಿದ್ದಾನೆ. ದ್ರೌಪದಿಯ ಪಾತ್ರದ ಮಹತ್ವವನ್ನು ಒಪ್ಪಿಕೊಂಡಿದ್ದರೂ, "ತನ್ನನ್ನು ಬಂಧಿಸಿದ ಕೆಲವು ಸಾಮಾಜಿಕ, ಅದಕ್ಕಿಂತ ಹೆಚ್ಚಾಗಿ ರಾಜಕೀಯ ಒತ್ತಡಗಳಿಂದಾಗಿ ಅವಳ ಪಾತ್ರಕ್ಕೆ ಸಂಪೂರ್ಣ ನ್ಯಾಯವನ್ನೊದಗಿಸ ಲಾಗದೆ ಸೋತಿದ್ದಾನೆ" — ಎಂಬ ಸರ್ವಮಾನ್ಯವಾದ ಅಭಿಪ್ರಾಯವನ್ನು ಮುಂದಿಡುತ್ತಾರೆ. ಆಶ್ರಯದಾತನಾದ ಅರಿಕೇಸರಿಯೊಂದಿಗೆ ಅಭೇದ ಕಲ್ಪಿಸಿ

ಚಿತ್ರಿಸಿದ ಅರ್ಜುನನಿಗೆ, ಅವನ ಹೆಂಡತಿ ಬೇರೆಯವರಿಗೂ ಹೆಂಡತಿಯಾಗುವುದು ಸಮ್ಮತವಲ್ಲ ಆದ್ದರಿಂದ ದ್ರೌಪದಿ ಅರ್ಜುನನಿಗೆ ಮಾತ್ರ ಹೆಂಡತಿ ; ಪಂಪನ ಅಭೇದ ಕಲ್ಪನೆಯ ಮೂಲಕವಾದ ಅನೌಚಿತ್ಯಗಳಲ್ಲಿ 'ದ್ರೌಪದಿಗಾದ ಅನ್ಯಾಯವೇ ಎಲ್ಲಕ್ಕಿಂತ ದೊಡ್ಡದೆನ್ನುತ್ತಾರೆ. ಪಾಶುಪತಾಸ್ತ್ರ ಸಂಪಾದನೆಯ ಪ್ರಸಂಗ ಮುಂತಾದುವಲ್ಲಿ ಭಾರವಿಯ ಪ್ರಭಾವವಿದೆಯೆನ್ನುತ್ತಾರೆ. ವನವಾಸ, ದ್ರೌಪದೀ ಹರಣ, ಪ್ರತಿಜ್ಞಾ ಪೂರೈಕೆ — ಮುಂತಾದ ಎಡೆಗಳಲ್ಲಿ ಪಂಪನು ಬದಲಾವಣೆ ಮಾಡಿಕೊಂಡಿದ್ದಾನೆ. ದ್ರೌಪದಿಯನ್ನು ವೀರವನಿತೆ, ಕ್ಷಾತ್ರಧರ್ಮ ಪತ್ನಿಯಂತೆ ಗುರುತಿಸಿ ವಿವರಿಸಿದ್ದರೆ ರನ್ನ, ಭಟ್ಟನಾರಾಯಣನಿಂದ ಪ್ರಭಾವಿತನಾಗುತ್ತಲೇ, ಅದಕ್ಕಿಂತ ಮುಂದುವರೆದು ತನ್ನ ಸ್ವತಂತ್ರ ದೃಷ್ಟಿಯಿಂದ ದ್ರೌಪದಿಯನ್ನು ಉಜ್ವಲವಾಗಿ ಚಿತ್ರಿಸಿದ್ದಾನೆ. ಯುದ್ಧರಂಗ ದಲ್ಲಿ ದ್ರೌಪದಿಯನ್ನು ಎರಡು ಸಲ ಪ್ರವೇಶ ಮಾಡಿಸಿದ್ದಾನೆ. "ಮಹಾಮಾರಿಯೇ ಮಾಯಾವಿದ್ಯೆಯಿಂದ ಸುಂದರ ರಮಣಿಯಾಗಿ ಸುಳಿದಳಲ್ಲದೆ ದ್ರೌಪದಿಯೇನು ಸಾಮಾನ್ಯಳೇ ?' ಎಂಬಂತೆ, ದ್ರೌಪದಿ ತಾನು ಅನುಭವಿಸಿದ ಕಷ್ಟಗಳಿಗೆ ಕ್ರೂರಿಯೂ, ಉಗ್ರಳೂ ಆಗಿ ಸಮರ್ಥನೀಯಳಾಗುತ್ತಾಳೆ".

ಪಾರಮಾರ್ಥಿಕ ದೃಷ್ಟಿಯ ಹಿನ್ನೆಲೆಯಲ್ಲಿ ಕುಮಾರವ್ಯಾಸನು, ತನ್ನ ಭಾರತ ವನ್ನು ರಚಿಸಿರುವುದರಿಂದ, ಅವನಿಗೆ ಅದು ಕೃಷ್ಣಕಥೆ, ಕಾವ್ಯದ ಆದಿ ಮಧ್ಯಾಂತ ಗಳೆಲ್ಲವೂ ಕೃಷ್ಣಮಯ. ಕೃಷ್ಣನೇ ಕಾವ್ಯನಾಯಕ ಕಥಾನಾಯಕನಾದರೂ ದ್ರೌಪದಿಯ ವ್ಯಕ್ತಿತ್ವಕ್ಕೆ ಚ್ಯುತಿ ತಾರದ ಎಚ್ಚರಿಕೆ ವಹಿಸಿರುವುದನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ. ದೈವಭಕ್ತಿ ಪಾತಿವ್ರತ್ಯಗಳು ದ್ರೌಪದಿಯ ಗುಣ ವಿಶೇಷಣಗಳಾಗಿವೆ. ಮೂಲ ಮಹಾಭಾರತಕ್ಕೆ ನಿಷ್ಠೆಯಿಂದಿರುವುದರ ಜೊತೆಗೆ "ದ್ರೌಪದಿ ಬರುವ ಸಂದರ್ಭ ಗಳಲ್ಲಿ ಕಾಣಬರುವ ರಸೋತ್ಕರ್ಷ ಕುಮಾರವ್ಯಾಸನದೆಂದೇ ನಿರ್ಣಯಿಸುತ್ತಾರೆ. ಪಂಚಪತಿತ್ವವು ವ್ಯಾಸರು ಹೇಳುವ ದ್ರೌಪದಿಯ ಪೂರ್ವ ವೃತ್ತಾಂತದ ಮೂಲಕ ಸಮರ್ಥನೆ ಪಡೆಯುತ್ತದೆ. ದ್ರೌಪದಿಯ ಅಕ್ಷಯವಸ್ತ್ರಪ್ರಸಂಗ ಕೃಷ್ಣ ಪಾರಮ್ಯವನ್ನು ಸಾರಲು ಕುಮಾರವ್ಯಾಸನಿಗೆ ಸದವಕಾಶವನ್ನು ಕಲ್ಪಿಸಿದೆ. ಒಂದೊಂದು ಪ್ರಸಂಗ ದಲ್ಲಿಯೂ ಕುಮಾರವ್ಯಾಸ ತನ್ನ ಅದ್ಭುತ ಕಾವ್ಯದೃಷ್ಟಿ, ಪ್ರತಿಭೆಗಳನ್ನು ತೋರಿ ಸಿದ್ದಾನೆ. ಮೂಲ ಮಹಾಭಾರತದಲ್ಲಿಲ್ಲದ ಪ್ರಸಂಗಗಳನ್ನು ಸೇರಿಸಿಕೊಂಡಿದ್ದಾನೆ. ಇರುವುದನ್ನು ತನ್ನ ಆಶಯಕ್ಕೆ ಹೊಂದುವಂತೆ ಹಿಗ್ಗಲಿಸಿಕೊಂಡಿದ್ದಾನೆ ಇಲ್ಲವೆ ವ್ಯತ್ಯಯ ಮಾಡಿಕೊಂಡಿದ್ದಾನೆ. ಕೃಷ್ಣ ಭಕ್ತಿಗೆ ದ್ರೌಪದಿ ಭಿತ್ತಿಯಾದಂತೆ ಅವನ ಮುತ್ಸದ್ದಿ ತನಕ್ಕೆ, ಪ್ರತ್ಯಕ್ಷವಾಗಲ್ಲದಿದ್ದರೂ ಪರೋಕ್ಷವಾಗಿ ಪ್ರೇರಕಶಕ್ತಿಯಾಗಿದ್ದಳೆನ್ನುವಂತೆ ಚಿತ್ರಿತಳಾಗಿದ್ದಾಳೆ. ಸೇಡು ತೀರಿಸಿಕೊಳ್ಳಲು ಟೊಂಕಕಟ್ಟಿ ನಿಂತಿರುವಂತೆ ಕಾಣುತ್ತಾಳೆ.

ಜೈನ ಭಾರತಗಳಲ್ಲಿ 'ದ್ರೌಪದಿ'ಯ ವಿವರಗಳು ಬಂದಿರುವುವಾದರೂ ಜೈನ ಧರ್ಮ ದೃಷ್ಟಿಗನುಗುಣವಾಗಿ ರೂಪಾಂತರಗೊಂಡಿವೆ. ಪಂಚಪತಿತ್ವವನ್ನು ಒಪ್ಪದ

ಜೈನದೃಷ್ಟಿಯಲ್ಲಿ ಆಕೆ ಏಕಪತಿತ್ವ ಉಳ್ಳವಳೆಂದು ಚಿತ್ರಿತಳಾಗಿದ್ದರೂ, ಬಹಳ ಹಿಂದಿನಿಂದಲೇ ಬೇರುಬಿಟ್ಟ ಜನಮನದಲ್ಲಿನ 'ಪಂಚಪತಿತ್ವ'ದ ಪ್ರಭಾವದಿಂದ ತಮ್ಮನ್ನು ಮುಕ್ತವಾಗಿರಿಸಿಕೊಳ್ಳಲು, ಜೈನ ಕವಿಗಳು ಪ್ರಯಾಸಪಟ್ಟುದನ್ನು, ಅದರಿಂದ ಬಿಡಿಸಿಕೊಳ್ಳಲು ಬಳಸುದಾರಿಗಳನ್ನು ಹಿಡಿಯುತ್ತಿರುವುದನ್ನು, ಹಿಡಿದಿರುವುದನ್ನು ಕರ್ಣಪಾರ್ಯ ಮುಂತಾದವರ ಕಾವ್ಯಗಳಿಂದ ತೋರಿಸಿದ್ದಾರೆ. ದ್ರೌಪದಿಯನ್ನು ಜನರು ಅಜ್ಞಾನದಿಂದ ಪಂಚಪತಿಗಳುಳ್ಳವಳೆಂದು, ಕರ್ಣಪಾರ್ಯನು ಹೇಳಿ ನುಣುಚಿಕೊಂಡಿದ್ದರೆ, ಸಾಳ್ವ, ಶಿಷ್ಟರೆಂದು ಕರೆಸಿಕೊಳ್ಳುವ ಪಾಂಡವರು ಐದು ಮಂದಿ ಓರ್ವಳನ್ನು ರಮಿಸಿದರೆ ಜಗತ್ತಿನಲ್ಲಿ ಹೇಗೆ ಅವರು ಅಭಿವಂದ್ಯರಾಗುತ್ತಾರೆಂದು ಪ್ರಶ್ನಿಸಿದ್ದಾನೆ. ಆದ್ದರಿಂದ ಜೈನ ದೃಷ್ಟಿಯಲ್ಲಿ ದ್ರೌಪದಿ ಏಕಪತಿತ್ವವನ್ನುಳ್ಳವಳೆಂದೂ, ಅದೂ ಅರ್ಜುನನಿಗೆ ಮಾತ್ರ ಮೀಸಲೆಂದೂ ವಿವರಿಸುತ್ತವೆ. ಹಾಗೆಯೇ ಪಂಪನಿಂದ ಪ್ರಭಾವಗೊಂಡ ಕವಿಗಳು ದ್ರೌಪದೀ ಹರಣ ಪ್ರಸಂಗವನ್ನು ಹೆಚ್ಚು ವಿಸ್ತರಿಸಿದ್ದಾರೆ ಎನ್ನುತ್ತಾರೆ. ಕರ್ಣಪಾರ್ಯ, ಸಾಳ್ವ, ಚಾವುಂಡರಾಯ ಮೊದಲಾದವರು ಕಥೆಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿರುವ ಅಂಶವನ್ನು ಸ್ಥೂಲವಾಗಿ ವಿವರಿಸಿದ್ದಾರೆ. ಹರಿವಂಶ ಹೊರತಾಗಿ, ಉಳಿದ ಜೈನ ಭಾರತಗಳಲ್ಲಿ ವಿರಾಟ ನಗರಕ್ಕೆ ದ್ರೌಪದಿಯ ಪ್ರವೇಶವೇ ಇಲ್ಲದಂತೆ ತೋರಿಸಿದ್ದಾರೆಂಬ ವಿವರವನ್ನು ನೀಡಿ ಜೈನ ಪರಂಪರೆಯಲ್ಲಿ ಲೌಕಿಕವೆಂದು ಪರಿಗಣಿತವಾದ ಮಹಾಭಾರತ ವಸ್ತು ಪಡೆದಿರುವ ಭಿನ್ನ ಆಯಾಮಗಳನ್ನು ಗುರುತಿಸಿದ್ದಾರೆ.

ಮುಂದಿನ ಅಧ್ಯಾಯಗಳಾದ ಹರಿದಾಸ ಕೀರ್ತನೆಗಳು, ಜನಪದ ಸಾಹಿತ್ಯ, ಆಧುನಿಕ ಸಾಹಿತ್ಯ — ಮುಂತಾದವುಗಳಲ್ಲಿ ದ್ರೌಪದಿ ಪ್ರಮುಖ ಪಾತ್ರವಾಗಿ ಮೈತಳೆದಿಲ್ಲ. ಹರಿಸ್ತುತಿಯ ಸಂದರ್ಭದಲ್ಲಿ, ದ್ರೌಪದಿಗೆ ಅಕ್ಷಯವಸ್ತ್ರವಿತ್ತೆ ಎಂದು ದಾಸರು ಪ್ರಸ್ತಾವಿಸಿರುತ್ತಾರೆಯೇ ಹೊರತಾಗಿ, 'ದ್ರೌಪದಿ' ಅವರ ಕೀರ್ತನೆಗಳ ವಸ್ತುವಲ್ಲ. ಜನಪದ ಕಾವ್ಯದಲ್ಲಿ ದ್ರೌಪದಿ, ಕೆಲವು ಗೀತಗಳಲ್ಲಿ ಮೂಡಿ ಬಂದಿದ್ದಾಳೆ. ದ್ರೌಪದಿಯ ಬಾಲ್ಯ, ಸ್ವಯಂವರ ಮುಂತಾದ ಸನ್ನಿವೇಶಗಳನ್ನು ವಿವರಿಸುವಾಗ ಹೆಚ್ಚಿನ ಕಥಾ ವ್ಯತ್ಯಾಸಗಳನ್ನು ಮಾಡಿಕೊಂಡಿಲ್ಲವಾದರೂ 'ಪರಂಪರೆಯ ಘಟನೆಗೆ ನವೀನತೆಯನ್ನು' ತಂದಿರುವುದನ್ನು ಗುರುತಿಸಿದ್ದಾರೆ. ಆಕಸ್ಮಾತ್ತಾಗಿ ಕಾಣುವ ಹೆಸರುಗಳಲ್ಲಿನ ವ್ಯತ್ಯಾಸದಿಂದ ದ್ರೌಪದಿಯ ಪಾತ್ರದ ಮೇಲೆ ಯಾವುದೇ ಪ್ರಭಾವ ಬಿದ್ದಿಲ್ಲ. ಗೌಡಿತಿ, ತೊತ್ತು, ಎಂದು ಸಂಬೋಧಿಸುವುದರ ಮೂಲಕ "ಸಾಮಾನ್ಯ ಜನಜೀವನದ ಗ್ರಾಮ್ಯತೆ ಇಣಿಕಿದೆ"—ಎಂದು ಅಭಿಪ್ರಾಯ ಪಡುತ್ತಾರೆ. ಕೆಲವು ಸಂಪ್ರದಾಯದ ಹಾಡುಗಳಲ್ಲಿ ದ್ರೌಪದಿಯ ಪತಿಭಕ್ತಿ, ಕೃಷ್ಣಭಕ್ತಿ ಮುಂತಾದ ಅಂಶಗಳು ಎದ್ದುಕಾಣುತ್ತವೆ ಎಂಬುದನ್ನು ಇವರು ಸ್ಪಷ್ಟವಾಗಿ ಗುರುತಿಸಿದ್ದಾರೆ.

ಆಧುನಿಕ ಸಾಹಿತ್ಯ ಪ್ರಕಾರಗಳಾದ ಕಥೆ, ಕಾದಂಬರಿ, ನಾಟಕ, ಕಾವ್ಯ ಇತ್ಯಾದಿಗಳಲ್ಲಿ ಮಹಾಭಾರತದ ವಿಭಿನ್ನ ಪ್ರಸಂಗಗಳು, ವಿಭಿನ್ನ ಪಾತ್ರಗಳು ವಸ್ತು

ವಾಗಿದೆ. ಸ್ಮಶಾನ ಕುರುಕ್ಷೇತ್ರ, ಮಹಾಪ್ರಸ್ಥಾನ, ಪರ್ವ, ಯುಗಾಂತ, ಕೀಚಕ, ಆಗ್ರಹ, 'ಸೈರಂಧ್ರಿ' ಮೊದಲಾಗಿ ಅನೇಕ ಕೃತಿಗಳು ರಚಿತವಾಗಿವೆ. ಇವುಗಳಲ್ಲಿ, ಸೈರಂಧ್ರಿ ಮತ್ತು 'ಕೀಚಕ'ಗಳನ್ನು ಬಿಟ್ಟರೆ ದ್ರೌಪದಿ ಕ್ವಚಿತ್ತಾಗಿ ಕಾಣಿಸಿಕೊಳ್ಳು ತ್ತಾಳೆ. ಭೈರಪ್ಪನವರ 'ಪರ್ವ' ಕಾದಂಬರಿಯ ಹಿನ್ನೆಲೆಯ ಪ್ರೇರಣೆ ಆಧುನಿಕ ದೃಷ್ಟಿ. ಆದ್ದರಿಂದ ಇಲ್ಲಿನ ದ್ರೌಪದಿ, ಆಧುನಿಕ ಕಾಲದ ಒಬ್ಬ ವಿಚಾರವಂತ ವ್ಯಕ್ತಿಯ ಎತ್ತರಕ್ಕೆ ಬೆಳೆಸಿದ್ದಾರೆಂಬುದು ಲೇಖಕಿಯ ನಿಲುವು. 'ಯುಗಾಂತ'ದಲ್ಲಿ ದ್ರೌಪದಿಯ ಅಂತರಂಗ ಪರಿಶೋಧನೆ ನಡೆದಿರುವುದನ್ನು ಗಮನಿಸಿ, ಇದರಿಂದಾಗಿ ಅವಳ ವ್ಯಕ್ತಿತ್ವದ ಬೆಳವಣಿಗೆಗೆ ಯಾವುದೇ ಬಗೆಯಲ್ಲಿ ಸಹಾಯಕವಾಗಿಲ್ಲವೆಂದು ಅಭಿಪ್ರಾಯ ಪಡುತ್ತಾರೆ.

ಬೇರೆ ಬೇರೆ ದೃಷ್ಟಿಕೋನಗಳಿಂದ ವಸ್ತು ಪ್ರಸಂಗಗಳ ವಿಶ್ಲೇಷಣೆ ನಡೆದಿರು ವುದರಿಂದ, ದ್ರೌಪದಿಯ ಪಾತ್ರಕ್ಕೆ ಪ್ರಾಮುಖ್ಯ ದೊರೆಯದೆ, ಕ್ವಚಿತ್ತಾಗಿ ಕಾಣಿಸಿ ಕೊಳ್ಳುತ್ತಾಳೆ. ಅವಳು ಕಾಣಿಸಿಕೊಳ್ಳುವ ಸಂದರ್ಭಗಳನ್ನು ಪ್ರತಿಯೊಬ್ಬ ಕವಿ ನಾಟಕಕಾರನು ತನ್ನ ಪ್ರತಿಭೆ, ಮನೋಧರ್ಮಗಳಿಗನುಗುಣವಾಗಿ ಕೆಲವು ವ್ಯತ್ಯಾಸ ಗಳನ್ನು ಮಾಡಿಕೊಂಡಿದ್ದಾನೆ, ಸಂದರ್ಭಗಳನ್ನು ಸಂಕ್ಷೇಪಿಸಿದ್ದಾನೆ ಇಲ್ಲವೆ ವಿಸ್ತರಿಸಿದ್ದಾನೆ.

ಪ್ರಭಾವತಿಯವರು ಹಲವಾರು ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು 'ದ್ರೌಪದಿ'ಯ ಪಾತ್ರ ಚಿತ್ರಣದಲ್ಲಿನ ವ್ಯತ್ಯಾಸ, ವಿಕಾಸವನ್ನು ಗುರುತಿಸುವ ಪ್ರಯತ್ನದ ಜೊತೆಗೆ ಸಾಂದರ್ಭಿಕವಾಗಿ, ಆಯಾ ಕಾಲದ ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳ ವಿಶ್ಲೇಷಣೆಯನ್ನೂ ಮಾಡಿದ್ದಾರೆ. ಉದಾಹರಣೆಗೆ, ಆರ್ಯರಲ್ಲದವರಲ್ಲಿ ಬಹುಪತಿತ್ವ ಈಗಲೂ ಇದೆಯೆಂಬ ಅಂಶವನ್ನೂ, ಹಾಲಕ್ಕಿ ಒಕ್ಕಲಿಗರಲ್ಲಿ ಬಹು ಪತಿತ್ವಕ್ಕೆ, ಗಂಡು-ಹೆಣ್ಣುಗಳ ಲೆಕ್ಕದ ಅಸಮಾನತೆಯೇ ಕಾರಣವೆಂಬುದನ್ನೂ ಗುರುತಿಸಿ ವಿವರಿಸಿದ್ದಾರೆ. ದ್ರೌಪದಿಯ ಪಾತ್ರ ವಿಶ್ಲೇಷಣೆ, ಚಿಂತನೆಯ ಸಂದರ್ಭ ದಲ್ಲಿ, ಅವಳ ಪಂಚಪತಿತ್ವವೇ ಪ್ರಮುಖ ಚಿಂತನಾಂಶವಾಗಿ, ಅದರಿಂದಲೇ ಮತ್ತೆ ಅವಳ ಬೇರೆ ಬೇರೆ ಸಮಸ್ಯೆಗಳು ಹುಟ್ಟಿಕೊಂಡು ಜಟಿಲಗೊಳ್ಳುವುದನ್ನು ಕಾಣುತ್ತೇವೆ. ಗ್ರಂಥದ ಕೊನೆಗೆ, ನಿರ್ಣಾಯಕವಾಗಿ, ಪಂಚಪತಿತ್ವವೇ ಮಹಾಭಾರತ ಕಥೆಯ ಬೆಳವಣಿಗೆಗೆ, ಪಾತ್ರಗಳ ನಡವಳಿಕೆಗಳಿಗೆ, ಕುರುಕ್ಷೇತ್ರ ಯುದ್ಧದ ಕಾರ್ಯಕಾರಣ ಸಂಬಂಧಕ್ಕೆ ಬೇರ್ಪಡಿಸಲಾಗದ ಒಂದು ಸಾವಯವ ಸಂಬಂಧವುಳ್ಳ ಮುಖ್ಯ ಸಂಗತಿ ಯಾಗಿರುವುದು ಮಾತ್ರವಲ್ಲ, ದ್ರೌಪದಿಯ ಪಾತ್ರದ ಜಟಿಲ ಸ್ವರೂಪವನ್ನು ನಿರ್ಧರಿಸುವ ಅಂಶವೂ ಆಗಿದೆ. ಎಂಬ ಅಭಿಪ್ರಾಯವನ್ನು ತಲುಪುತ್ತಾರೆ.

ಪ್ರಭಾವತಿಯವರ ಈ ಗ್ರಂಥ, ದ್ರೌಪದಿಯ ಜೀವನ ವೃತ್ತಾಂತದ ವಿವರಗಳಲ್ಲಿ ಜಿಜ್ಞಾಸೆಯುಳ್ಳವರಿಗೆ ಅತ್ಯಂತ ಉಪಯುಕ್ತ ಆಕರವಾಗುತ್ತದೆ.

—ಡಾ ವಿಜಯಾ ಸುಬ್ಬರಾಜ್

**ಸ್ವಪ್ನ — ಸೋಪಾನ :** ಡಾ. ದ್ವಾರಕಾನಾಥ್ ಎಚ್. ಕಬಾಡಿಯವರು ಈಗಾಗಲೇ 'Lamps of Home', 'Melting Moments' ಎಂಬಿವೇ ಮುಂತಾದ ಏಳು ಕವನ ಸಂಗ್ರಹಗಳನ್ನು ಇಂಗ್ಲಿಷಿನಲ್ಲಿ, 'ಹೊನ್ನಿನ ಮಡಿಲಲ್ಲಿ' (ಕಾದಂಬರಿ), 'ಗೀತ ಗಂಗೋತ್ರಿ' 'ಮಿಂಚಿನ ಬುಟ್ಟಿ' (ಕವನ ಸಂಗ್ರಹಗಳು) ಎಂಬ ಕೃತಿಗಳನ್ನು ಕನ್ನಡದಲ್ಲಿ ಪ್ರಕಟಿಸಿದ್ದಾರೆ. ಅವರು ಇತ್ತೀಚೆಗೆ ಪ್ರಕಟಿಸಿದ 102 ಕವನಗಳಿಂದ ಕೂಡಿದ ಅಚ್ಚಹೊಸ ಕವನ ಸಂಕಲನ 'ಸ್ವಪ್ನ-ಸೋಪಾನ'. ಶ್ರೀಯುತರು ಪ್ರಾರಂಭದ ಕವನ ಸಂಗ್ರಹಗಳಲ್ಲಿಯೇ ತಮ್ಮ 'ಪ್ರತಿಭಾ ಶಕ್ತಿ'ಯನ್ನು ಮೆರೆದಿದ್ದಾರೆ. ಅದು ಇನ್ನಷ್ಟು ನಿಚ್ಚಳವಾಗಿ ವ್ಯಕ್ತವಾಗಿದೆ. ಅವರ 'ಸ್ವಪ್ನ-ಸೋಪಾನದಲ್ಲಿ ಅನೇಕ ವಿಶಿಷ್ಟಾಂಶಗಳಿಂದ ಕೂಡಿದ ಈ ಕೃತಿ ಇವತ್ತಿನ ಸಂದರ್ಭದಲ್ಲಿ ತುಂಬ ಮುಖ್ಯವಾದುದು ಎನಿಸುತ್ತದೆ. ಕೆಲವರ ಪ್ರಕಾರ 'ನವ್ಯ ಕಾವ್ಯರಚನೆ' ಇಂದು ನಿಂತಿದೆ; ಆದರೆ ಅದು 'ಬತ್ತಲಾರದ ಗಂಗೆ' ಎಂಬುದನ್ನು ಪ್ರಸ್ತುತ ಕವನಸಂಗ್ರಹ ಸಾಬೀತು ಪಡಿಸುತ್ತದೆ.

'ಸ್ವಪ್ನ-ಸೋಪಾನ'ಕ್ಕೆ ಹಿನ್ನುಡಿ ಬರೆದಿರುವ ಸುಪ್ರಸಿದ್ಧ ಕವಿ ಶ್ರೀ ದೊಡ್ಡರಂಗೇಗೌಡ ಅವರೂ ಸಹ ಮೇಲಿನ ಅಂಶವನ್ನು ಗುರುತಿಸಿದ್ದಾರೆ. ಅರ್ಥಾನುಸಾರಿಯಾಗಿ ಶಬ್ದ ಪಾದಗಳನ್ನು ಒಡೆದು ತೋರಿಸುವ ರೀತಿ ; ವಾಮನನಂತಿರುವ ಪುಟ್ಟಪಾದಗಳಲ್ಲಿ ತ್ರಿವಿಕ್ರಮನಂತೆ ಹರಡಿರುವ ಅರ್ಥ ; ವಸ್ತುವೈವಿಧ್ಯ ; ನಿರರ್ಗಳವಾಗಿ ಓದಿಸಿಕೊಂಡು ಹೋಗುವ ಗುಣ ; ಪ್ರತಿಮೆ-ಸಂಕೇತಗಳನ್ನು ಹೆಣೆದಿರುವ ರೀತಿ ; ಭಾವಕತೆ, ಧ್ವನಿ, ಪ್ರಾಸಾನುಪ್ರಾಸಗಳ ಬಳಕೆ — ಹೀಗೆ ಸಮಸ್ತ ಕಾವ್ಯ ಕ್ರಿಯೆಗಳನ್ನೊಳಗೊಂಡ ಈ ಕೃತಿಯನ್ನು ಓದುವುದೇ ಒಂದು ಸಂತೋಷ.

ದೂರವನ್ನು ನಟಿಸಿ ತೋರಿಸುವುದಕ್ಕಾಗಿ ಶಬ್ದಗಳನ್ನು ಒಡೆಯುವುದು; ಪ್ರಜ್ಞಾಹೀನ ಸ್ಥಿತಿಯಲ್ಲಿರುವ ವ್ಯಕ್ತಿಯನ್ನು ಎಚ್ಚರಗೊಳಿಸುವುದಕ್ಕಾಗಿ ಬಳಸಿರುವ ದೀರ್ಘಾಕ್ಷರಗಳು ; ಚಿಂತನೆಯಲ್ಲಿ ಮುಳುಗಿಸುವ ಪದಬಂಧ — ಮುಂತಾದವುಗಳಿಗಾಗಿ 'ಛಾಯೆಗಳ ಕುಣಿತ ' (ಪುಟ : 4), 'ಮುರಿದ ಕನಸುಗಳು' (ಪುಟ : 8) ಎಂಬ ಕವನಗಳನ್ನು ಗಮನಿಸಬೇಕು.

ದೂರ ಪರಿಧಿಯಿಂದ
ಕೇಳಿಸಿಯೂ
ಕೇಳಿಸದಂತಿರುವ
ಅತೀತದೊಂದು ಮಂದ್ರ

---

* 'ಸ್ವಪ್ನ-ಸೋಪಾನ' : ಡಾ॥ ದ್ವಾರಕಾನಾಥ್ ಎಚ್. ಕಬಾಡಿ. ಪ್ರಕಾಶಕರು : 'ಶ್ರೀ ಚರಣ್', ನಂ. 80, 5ನೆಯ ಕ್ರಾಸ್, ಮೊದಲನೆಯ ಮುಖ್ಯ ರಸ್ತೆ, 8ನೆಯ ವಿಭಾಗ, ರಾಜಮಹಲ್ ವಿಲಾಸ್, 2ನೆಯ ಹಂತ, ಬೆಂಗಳೂರು-560 094 ; ಮೊದಲನೆಯ ಮುದ್ರಣ : 1991. ಪುಟ : viii + 146, ಬೆಲೆ : ರೂ. 35.00

ಕೂ

ಗು : ಪ್ರೊ. ಎ. ಕೆ. ರಾಮಾನುಜನ್ ಅವರ ಕಾವ್ಯ ಶೈಲಿಯ ಹೋಲಿಕೆಗಳನ್ನಿಲ್ಲಿ ಕಾಣಬಹುದು.

"ಹರಿ
ದಾರಿ
ಓಡಿದರೂ
ಹರಿಯು ಕಾಣದಾದೆ
ಮುರಿದ"........ (ಟಿಸಿಲೊಡೆದ ಅಶ್ವತ್ಥ : ಪುಟ-7)

ಎಂಬಲ್ಲಿ ಬಳಕೆಯಾಗಿರುವ ಪ್ರಾಸಾನು ಪ್ರಾಸಗಳ ಸೊಗಸನ್ನು ಪರಿಭಾವಿಸಬೇಕು.

ಶ್ರೀ ಕಬಾಡಿಯವರ 'ಕಾಮನೆಗಳ ಕಡಲು' (ಪುಟ : 13) ಆಧುನಿಕ ಪ್ರತಿಮಾವಿಧಾನವನ್ನೊಳಗೊಂಡ ಶ್ರೇಷ್ಠ ಕವನವಾಗಿದೆ.

"ಸಾವು ಸತ್ತಾಗ
ಅತ್ತವರ ಕಾಣದೆ
ಮನನೊಂದ ನನ್ನ
ಕಾಮನೆಗಳ ಕಡಲಿನಲಿ
ಕುಣಿದದ್ದು ಕಂಬನಿ ಧಾರೆ
ತೇಲಿಹೋದ ಮುರಿದ
ಸೂರ್ಯನ ಶವ".

ಕಬಾಡಿಯವರು ಬಳಸುವ ಶಬ್ದಗಳು ಸಹೃದಯರನ್ನು ಚಿಂತನೆಯತ್ತ ತಳ್ಳುವುದರೊಂದಿಗೆ ವಿಶಿಷ್ಟಾರ್ಥಗಳನ್ನು ಧ್ವನಿಸುತ್ತ ಹೋಗುವ ರೀತಿ ನವೀನವಾಗಿದೆ : ಅಷ್ಟೇ ಅಲ್ಲ, ಕವಿ ಇಲ್ಲಿ ಪ್ರಯೋಗಗಳನ್ನು ನಡೆಸುತ್ತಿದ್ದಾರೆ ಎನ್ನಿಸದೆ, 'ಸಿದ್ಧಹಸ್ತ ಶೈಲಿ'ಯೊಂದರಲ್ಲಿ ಕ್ರಮಿಸುತ್ತಿದ್ದಾರೆ ಎನ್ನಿಸುತ್ತದೆ. ಇದು ಕವಿಯ ಶ್ರೇಷ್ಠತೆಯನ್ನು ಸಾರಿ ಹೇಳುವಂಥದು.

ಈ ಕವಿ ಕವಿತೆಯನ್ನು ಪ್ರಾರಂಭಿಸುವ ರೀತಿ, ಅದನ್ನು ಅಂತ್ಯಗೊಳಿಸುವ ರೀತಿ ಸಹೃದಯರನ್ನು ಸೆಳೆಯುತ್ತದೆ:

"ಮುರಿದ ಮನದಲ್ಲಿ ಹರಿದ ಆಸೆ
ಹಾವಿನ ಹೆಡೆಯ ನೆರಳಲ್ಲಿ
ವಟಗುಟ್ಟಿದ ಕಪ್ಪೆ
ಒತ್ತರಿಸಿ ಬಂದ ಕತ್ತಲೆಯ ಅಲೆಯಲ್ಲಿ
ಬತ್ತಲಾದ ಮನ ದಿಸ" (ಕಪ್ಪೆಯ ನೆರಳು : ಪುಟ-14)

ಈ ಸಂಕಲನದ ಅತ್ಯಂತ ಯಶಸ್ವೀ ಕವನ 'ಗುರುತು' (ಪುಟ : 18) ಶೋಷಣೆಗೊಳಗಾದ ಸೂಳೆಯ ಜೀವನ ಚಿತ್ರವನ್ನು ಅತ್ಯಂತ ಧ್ವನಿಪೂರ್ಣವಾಗಿ ನೀಡುವ

ಕವನವಿದು. "ಅನನ್ಯ, ಪರಿಪೂರ್ಣ ಅಲ್ಲಮನ ವಚನಗಳ ಹಾಗೆ ಬೆಡಗಿನಿಂದ ಕೂಡಿದ್ದು. ಅದು ಕವಿ ಕಾಣುವ 'ನಾಯಿಸತ್ತ ಮೂಳೆ', 'ಹಾದರವ ಹಾಸಿದ ಹಾಸಿಗೆ', ಪ್ರತಿಮೆಗಳಲ್ಲಿ ಸಿಚ್ಚಳವಾಗಿದೆ. 'ತೆವಳಿಹೋದ ಶತಹಾವುಗಳು', 'ಲೈಂಗಿಕತೆಯ ಶೋಷಣೆಯ ನಗ್ನ ಚಿತ್ರ', 'ಅವು ಹರಿದ ಗುರುತು' — ಆಕೆ ರೋಗ ಗಳ ತೌರಾಗುವ ಸಂಕೇತ. ಹೀಗೆ ಸಮಾಜದ ಅರ್ಬುದರೋಗವಾದ ವೇಶ್ಯಾವೃತ್ತಿಯ ದುರಂತದ ಬಗೆಗಿನ ಕವಿಯ ಪ್ರಾಮಾಣಿಕ ಅನುಕಂಪ ನುಡಿನುಡಿಯಲ್ಲಿ ಅಭೂತ ಪೂರ್ವವಾಗಿ ದಾಖಲಾಗಿದೆ". (ಹಿನ್ನುಡಿ : ಪುಟ-iv-v)

ಪೌರಾಣಿಕ ವ್ಯಕ್ತಿ ಹಾಗೂ ವಿಚಾರಗಳನ್ನು ನವೀನ ಅರ್ಥಕ್ಕಾಗಿ ದುಡಿಸಿ ಕೊಳ್ಳುವ ರೀತಿಯನ್ನು ಇಲ್ಲಿ ಗುರುತಿಸಬಹುದು : ರಾಮ-ಲಕ್ಷ್ಮಣ, ಕಿಸಾಗೌತಮಿ, ಖಾಂಡವದಹನ, ಚಂದ್ರಹಾಸ, ಯಮ, ಸೀತೆ, ಪರ್ವತರಾಜ, ಶಿವ, ಯಜ್ಞ, ಹಾವು, ಕೃಷ್ಣ, ಭೀಮ, ಬಕಾಸುರ, ವಿದುರ, ಧೃತರಾಷ್ಟ್ರ, ಗಾಂಧಾರಿ, ದುಶ್ಶಾಸನ, ಶಕುನಿ, ಕೀಚಕ ಇಂಥವುಗಳಲ್ಲಿ ಕೆಲವು ಸಮಕಾಲೀನ ಸಮಸ್ಯೆಗಳತ್ತ ದೃಷ್ಟಿಹರಿಸಿ ಅನುಕಂಪೆಯನ್ನು ಬೀರುವ ಕವಿದೃಷ್ಟಿ ಮೆಚ್ಚುವಂಥದ್ದು. ಇದಕ್ಕಾಗಿ 'ಧರ್ಮಸತ್ತ ದಾರಿ' ಮತ್ತು 'ಮುಕ್ತಿ' ಎಂಬ ಕವಿತೆಗಳನ್ನು ನೋಡಬಹುದು. ತಾವು ವ್ಯಕ್ತಪಡಿಸಬೇಕೆಂದಿರುವ ಗಂಭೀರ ವಿಚಾರಗಳ ಸೂಚನೆಗಾಗಿ 'ದಡ, ಸಾಗರ, ಅಲೆ' ಎಂಬ ಮುಂತಾದ ಶಬ್ದಗಳು ಬಂದಿವೆ. ಈ ಶಬ್ದಗಳು ಕವಿಗೆ ತುಂಬ ಪ್ರಿಯವೆನಿಸುತ್ತದೆ. ಹೋಲಿಕೆ, ಬದುಕಿನ ಅಗಾಧ ಸಮಸ್ಯೆಗಳ ಚಿತ್ರಣಗಳಿಗಾಗಿ 'ಕಾಮನೆಗಳ ಕಣಜ' (ಪುಟ iii) ಕವಿತೆಯನ್ನು ನೋಡಬಹುದು.

ವಿಮರ್ಶಕರ ಮನೋಧರ್ಮವನ್ನು ಕೆಣಕುವ ಕಪ್ಪು-ಬಿಳುಪು ಕವನ ನೆನಪಿನಲ್ಲುಳಿಯುವಂಥದು. 'ಬೀದಿಗಿಳಿದ ಬಸವಿ', 'ಮೈ-ಮದುವೆ', 'ಬಿಂಬ-ಪ್ರತಿ ಬಿಂಬ', 'ಮನೆ-ಮನ', 'ಮರೆಯಾದ ಗಂಗೆ', 'ಇದು ನನ್ನ ಕವನವಲ್ಲ', 'ಅನಾಥ ಕವನ', 'ಸಮಯವಲ್ಲದ ಸಮಯ' ಹೆಸರಿಸಬಹುದಾದ ಕವನಗಳು. ಉಳಿದ ಕೆಲವು ಕವಿತೆಗಳಲ್ಲಿ ಕೆಲವು ಕಡೆ ಸಾಲುಗಳು ವಾಚ್ಯವಾಗಿವೆ ; ಶಬ್ದಗಳ ಪುನರಾವರ್ತನೆ ಯಾಗಿವೆ ; ಕೆಲವು ಕಡೆ ಸಾಲುಗಳನ್ನು ಅನಿವಾರ್ಯವಾಗಿ ಒಡೆದಂತೆ ಭಾಸವಾಗುವು ದಿಲ್ಲ : ಅಲ್ಲಿ ಇಲ್ಲಿ ಸಣ್ಣ ಪುಟ್ಟ ಮುದ್ರಣ ದೋಷಗಳು ಇವೆ ; ಆದರೂ ಕಾವ್ಯಾಸ್ವಾದನೆಗೆ ಇದರಿಂದ ಭಂಗವುಂಟಾಗುವುದಿಲ್ಲ. ಆಕರ್ಷಕವಾದ ಮುಖಪುಟ, ಸುಂದರವಾದ ಮುದ್ರಣ, ಅರ್ಥಪೂರ್ಣವಾದ ಶೀರ್ಷಿಕೆಗಳಿಂದ ಕೂಡಿದ 'ಸ್ವಪ್ನ-ಸೋಪಾನ' ಕವನ ಸಂಗ್ರಹ ಇತ್ತೀಚಿನ ಕಾವ್ಯರಚನೆಯ ಕೆಲವು ಮಾದರಿಗಳನ್ನು ಒಳಗೊಂಡಿದೆ. ಕಾವ್ಯ ಪ್ರಿಯರು ಓದಲೇಬೇಕಾದ ಸಂಗ್ರಹ ಇದು.

—ಜಿ. ಅಬ್ದುಲ್ ಬಷೀರ್

**ಸ್ಮೃತಿ-ಪುಷ್ಪ*** : ದಿ|| ಎ. ಆರ್. ಕೃಷ್ಣಶಾಸ್ತ್ರಿಯವರು ಕನ್ನಡಕ್ಕಾಗಿ, ಕನ್ನಡ ಸೇವೆಗಾಗಿ ತಮ್ಮನ್ನೇ ತೊಡಗಿಸಿಕೊಂಡವರು, ಕನ್ನಡದ ಆಚಾರ್ಯರಲ್ಲಿ ಒಬ್ಬರು. ಕನ್ನಡ ಸಾಹಿತ್ಯ ಲೋಕದಲ್ಲಿ ಅಚ್ಚಳಿಯದ ಸ್ಥಾನವನ್ನು ಹೊಂದಿರುವ ವ್ಯಕ್ತಿ. ಆದರೆ ಇಂದಿನ ಯುವಜನಾಂಗಕ್ಕೆ ಎ. ಆರ್. ಕೃಷ್ಣಶಾಸ್ತ್ರಿಗಳೆಂದರೆ ಯಾರು ಎಂದು ಕೇಳುವಂತಾಗಿದೆ. ಕಾರಣ ವ್ಯಕ್ತಿ ಗತಿಸಿಹೋದಂತೆ ಅವರು ಜನಮನದಿಂದಲೂ ಮರೆಯಾಗುವುದು ಸಹಜ. ಈ ರೀತಿ ವ್ಯಕ್ತಿ ಕಣ್ಮರೆಯಾದರೂ ಅವರು ಕನ್ನಡಕ್ಕಾಗಿ ಮಾಡಿರುವ ಕೆಲಸವನ್ನು ನೆನಪಿಸುವುದರ ಮೂಲಕ ಆ ವ್ಯಕ್ತಿಯ ನೆನಪು ಜನ ಮನ ದಲ್ಲಿ ಹಚ್ಚ ಹಸಿರಾಗಿರುವಂತೆ ಮಾಡುವಲ್ಲಿ, ಎ. ಆರ್. ಕೃಷ್ಣಶಾಸ್ತ್ರೀಯವರ ಮಗಳು ಶ್ರೀಮತಿ ಕೆ. ಶಾಂತ ಅವರು ಬಹಳವಾಗಿ ಶ್ರಮಿಸುತ್ತಿದ್ದಾರೆ. ಎ. ಆರ್. ಕೃ. ಅವರ ಸ್ಮರಣಾರ್ಥವಾಗಿ ಅವರ ಹೆಸರಿನಲ್ಲಿ ಎ. ಆರ್. ಕೃ. ಸಂಸ್ಕೃತಿ ಪೀಠ ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ಆ ಮೂಲಕ ಎ. ಆರ್. ಕೃ. ಅವರ ವ್ಯಕ್ತಿತ್ವ ಜೀವನ ಸಾಧನೆಗಳನ್ನು ಪರಿಚಯ ಮಾಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಎ. ಆರ್. ಕೃ. ಸಂಸ್ಕೃತಿ ಪೀಠ ಆರಂಭವಾದಂದಿನಿಂದ ಹಲವಾರು ಕಾರ್ಯಕ್ರಮ ಗಳನ್ನು ಹಮ್ಮಿಕೊಂಡು ಅವುಗಳನ್ನು ನೆರವೇರಿಸಿಕೊಂಡು ಬಂದಿದೆ. ಎ. ಆರ್. ಕೃ. ಅವರನ್ನು ಹಾಗೂ ಅವರ ಕೃತಿಗಳನ್ನು ಪರಿಚಯ ಮಾಡಿಕೊಡುವ ಉದ್ದೇಶದಿಂದ ಅವರ 14 ಕೃತಿಗಳನ್ನು 12 ಉಪನ್ಯಾಸಗಳಿಗೆ ಅಳವಡಿಸಿಕೊಂಡು ಕಾರ್ಯಕ್ರಮಗಳನ್ನು ಮಾಡಿದೆ. ಈ ಉಪನ್ಯಾಸಗಳನ್ನು "ಮಾಲಾರ್ಪಣೆ" ಎಂಬ ಪುಸ್ತಕ ರೂಪದಲ್ಲಿ ಹೊರ ತಂದಿದೆ. ಎ. ಆರ್. ಕೃ. ಅವರ ಹುಟ್ಟೂರಾದ ಅಂಬಳೆಯಲ್ಲಿ (ಅವರಿಗೆ ನೂರುವರ್ಷ ತುಂಬಿದ ನೆನಪಿಗಾಗಿ) ಶತಮಾನೋತ್ಸವವನ್ನು ಆಚರಿಸಿದೆ. ಹೀಗೆ ಹಲವಾರು ಕಾರ್ಯಕ್ರಮಗಳನ್ನು ಮಾಡುತ್ತಿರುವ ಈ ಸಂಸ್ಥೆಗೆ ಹತ್ತು ವರ್ಷಗಳು ತುಂಬಿವೆ. ಆ ನೆನಪಿಗಾಗಿ ದಶಮಾನೋತ್ಸವವನ್ನು ಆಚರಿಸಿ ಎ. ಆರ್. ಕೃ. ಅವರ ನೆನಪಿಗಾಗಿ ಸ್ಮರಣ ಸಂಚಿಕೆ "ಸ್ಮೃತಿ ಪುಷ್ಪ"ವನ್ನು ಕಾಣಿಕೆಯಾಗಿ ಕೊಟ್ಟಿದೆ.

ಈ ಪುಸ್ತಕವು ಮುನ್ನುಡಿಯಿಂದ ಮೊದಲ್ಗೊಂಡು ಎ. ಆರ್. ಕೃ. ಅವರ ಕೈ ಬರಹ, ಜಾತಕ ವಂಶಾವಳಿ ಹಾಗೂ 19 ಲೇಖನಗಳನ್ನು ಒಳಗೊಂಡಿದೆ. ಈ ಎಲ್ಲಾ ಲೇಖನಗಳನ್ನು ಬರೆದವರು ಯಾರೂ ಅವರ ಸಮಕಾಲೀನರಾಗಿರದೆ ಕೆಲವರು ಅವರ ಶಿಷ್ಯರಾಗಿದ್ದವರು, ಉಳಿದವರು ಅವರ ಆಪ್ತ ವರ್ಗದವರು ಮಕ್ಕಳು ಹಾಗೂ ಮೊಮ್ಮಕ್ಕಳು ಆಗಿದ್ದಾರೆ.

---

* **ಸ್ಮೃತಿ-ಪುಷ್ಪ** : ಎ. ಆರ್. ಕೃ. ಸಂಸ್ಕೃತ ಪೀಠ, ಎ.ಆರ್.ಕೃ. ರಸ್ತೆ, ಬೆಂಗಳೂರು-4 1992.

ಎ. ಆರ್. ಕೃ. ಅವರ ಶಿಷ್ಯರಾದ ಎನ್. ಬಸವಾರಾಧ್ಯ, ರಾಮರಾವ್ ಮೊದಲಾದವರ ಲೇಖನಗಳಲ್ಲಿ ಗುರು-ಶಿಷ್ಯರ ಸ್ನೇಹ ಸಂಬಂಧ ಹಾಗೂ ಒಡನಾಟ ಗಳನ್ನು ಕಾಣಬಹುದಾದರೆ ಅವರ ಮಕ್ಕಳು ಮೊಮ್ಮಕ್ಕಳು ಹಾಗೂ ಆಪ್ತ ವರ್ಗ ದವರು ಬರೆದಿರುವ ಲೇಖನಗಳಲ್ಲಿ ಅವರ ಸ್ವಭಾವ, ಮನೆಯವರೊಡನೆ ಅವರು ನಡೆದುಕೊಳ್ಳುತ್ತಿದ್ದ ರೀತಿ, ಸ್ನೇಹಿತರ ಜೊತೆಯಲ್ಲಿ ಅವರ ವರ್ತನೆ ಹಾಗೂ ಸ್ನೇಹ ಪರತೆ ಮೊದಲಾದವುಗಳನ್ನು ಕಾಣಬಹುದು.

ಈ ರೀತಿಯಾಗಿ "ಸ್ಮೃತಿ ಪುಷ್ಪ" ಉತ್ತಮ ಲೇಖನಗಳನ್ನೊಳಗೊಂಡ ಗ್ರಂಥ ವಾಗಿದೆ. ಇದರ ಸಂಪಾದಕಿಯವರಾದ ಶ್ರೀಮತಿ ಕೆ. ಶಾಂತ ಅವರು ಸ್ವತಃ ಲೇಖಕಿಯೂ ಹಾಗೂ ಕತೆಗಾರ್ತಿಯೂ ಆಗಿದ್ದಾರೆ. ಎ. ಆರ್. ಕೃ. ಸಂಸ್ಕೃತಿ ಪೀಠವನ್ನು ಸ್ಥಾಪಿಸಿ ಇಂದಿನ ಯುವಪೀಳಿಗೆಗೆ ಅವರ ಪರಿಚಯಮಾಡಿ ಕೊಡುವಲ್ಲಿ ಅವರ ಸೇವೆ ಅಮೂಲ್ಯವಾದುದು.

—ಜಿ. ಆರ್. ಶೇಷಗಿರಿ

**ಶ್ರೀ ಯಾಜ್ಞವಲ್ಕ್ಯ ಚರಿತಾಮೃತ** (ಬಾಲಕಾಂಡ)* : ಕವಿ - ಗಮಕಿ ಪ್ರವರರಾದ ಶ್ರೀ ಆರ್. ಶಂಕರನಾರಾಯಣ್ ಅವರಿಂದ ರಚಿತವಾದ ಈ ಕಾವ್ಯ ವಾರ್ಧಕ ಷಟ್ಪದಿಯಲ್ಲಿದೆ. ಈ ಕಾವ್ಯದ ಕಥಾನಾಯಕ ಬ್ರಹ್ಮಜ್ಞಾನಿ ಮಹರ್ಷಿ ಯಾಜ್ಞವಲ್ಕ್ಯ. ಯಜ್ಞವಲ್ಕ ಎಂಬ ಹೆಸರೂ ಉಳ್ಳ ಮುನಿ ದೇವರಾತರ ಪುತ್ರ. ವೈಶಂಪಾಯನರ ಶಿಷ್ಯರಾಗಿದ್ದು, ವೈಶಂಪಾಯನರಿಗೂ ತಿಳಿಯದಿದ್ದ ವೇದ ಭಾಗ ವನ್ನು ಸೂರ್ಯನ ಉಪದೇಶದಿಂದ ಪಡೆದು ಶುಕ್ಲ ಯಜುರ್ವೇದವನ್ನು ರಚಿಸಿದ ಮಹಾ ಮಹಿಮ. ಜನಕರಾಜನ ಆಸ್ಥಾನದಲ್ಲಿ ಋಷಿಪಂಡಿತರನ್ನು ವಾದದಲ್ಲಿ ಸೋಲಿಸಿ ಸಾವಿರ ಹಸುಗಳನ್ನೂ ಸರ್ವಜ್ಞ ಪ್ರಶಸ್ತಿಯನ್ನೂ ಪಡೆದ ವ್ಯಕ್ತಿ. ಆಶಾವಾದವನ್ನು ಎತ್ತಿಹಿಡಿದ ಬ್ರಹ್ಮಜ್ಞಾನಿ. ಆದುದರಿಂದ ಇದೊಂದು ಪುಣ್ಯಕರ ಕಾವ್ಯ.

ಈ ಕಾವ್ಯದ ಆದಿಯ ನಾಂದಿ ಪದ್ಯಗಳ ಅನಂತರ, ಆರು ಕುಸುಮ (ಸಂಧಿ) ಗಳಲ್ಲಿ ಕಾವ್ಯ ಕಥಾ ಭಾಗವಿದೆ. ಈ ಭಾಗವನ್ನು 'ಬಾಲಕಾಂಡ' ಎನ್ನಲಾಗಿದೆ. ಇದರಲ್ಲಿ ಯಾಜ್ಞವಲ್ಕ್ಯರ ಜನ್ಮ ಹಾಗೂ ಅದ್ಭುತ ಮಹಿಮೆಯ ಬಾಲ್ಯದ ವಿವರಣೆ ಗಳಿವೆ. ಇವು ಓದುಗರ ಕುತೂಹಲವನ್ನು ಕೆರಳಿಸಿ, ಈ ಕಾವ್ಯದ ಮುಂದಿನ ಭಾಗವನ್ನು ಕಾಣಲು ತವಕಪಡಿಸುವಂತಿವೆ. ಯಾಜ್ಞವಲ್ಕ್ಯ ಚರಿತೆಯನ್ನು ವೈಶಂಪಾಯನ ಮುನಿ

* ಶ್ರೀ ಯಾಜ್ಞವಲ್ಕ್ಯ ಚರಿತಾಮೃತ : ಆರ್. ಶಂಕರನಾರಾಯಣ್, ಸತ್ಯಶ್ರೀ ಪ್ರಕಾಶನ, 68, ಐ.ಟಿ.ಐ. ಬಡಾವಣೆ, ಬನಶಂಕರಿ 3ನೇ ಹಂತ, ಬೆಂಗಳೂರು-85, 1992, ಪುಟ 135, ಬೆಲೆ 25.00.

ತನ್ನ ಆಶ್ರಮದ ಶಿಷ್ಯರಿಗೆ ಹೇಳುವಂತೆ ನಿರೂಪಿತವಾಗಿದೆ. ಯಾಜ್ಞವಲ್ಕ್ಯರಿಗೆ ಬಾಲ್ಯದಲ್ಲಿಯೇ ಬ್ರಹ್ಮಜ್ಞರ ಕತೆಗಳನ್ನು ಕೇಳಲು ಇಷ್ಟವೆಂಬುದು ಇಲ್ಲಿ ನಿರೂಪಿತವಾಗಿದೆ. ಈ ಕೃತಿಯ ಆರು ಕುಸುಮಗಳ ಪದ್ಯಾನಂತರ ಪದ್ಯಗಳಿಗೆಲ್ಲ ಅನುಕ್ರಮವಾಗಿ ಗದ್ಯಾನುವಾದವನ್ನು ಕೊಡಲಾಗಿದೆ. ಅನಂತರ ಎರಡು ಸಹಬಂಧ (ಪರಿಶಿಷ್ಟ) ಗಳಲ್ಲಿ ಕೆಲವು ಮುಖ್ಯ ವಿವರಣೆಯನ್ನೂ ಅರ್ಥಕೋಶವನ್ನೂ ಕೊಡಲಾಗಿದೆ. ಇದರಿಂದ ಓದುಗರಿಗೆ ಕಾವ್ಯಾರ್ಥಕ್ಕೆ ಹೆಚ್ಚಿನ ಮಾರ್ಗದರ್ಶನವಾಗಿದೆ.

ಈ ಕಾವ್ಯರಚನೆಗೆ ಹಿರಿಮೆಯಿದೆ. ಅನೇಕ ಆಧುನಿಕ ಕವಿಗಳಂತೆ ಕವಿಮಾರ್ಗವನ್ನು ತೊರೆದು, ಛಂದಸ್ಸು ಬಿಟ್ಟು ಇಲ್ಲವೆ ಕೆಡಿಸಿ, ವ್ಯಾಕರಣವನ್ನು ತೀರಾ ಅಲಕ್ಷ್ಯ ಮಾಡಿ, ರಚಿಸುವ ಹವ್ಯಾಸಕ್ಕೆ ಬಲಿಬೀಳದೆ ಈ ಕಾವ್ಯಕರ್ತರು ಸತ್ಕವಿ ಪರಂಪರೆಯನ್ನು ಕಾಯ್ದುಕೊಂಡಿರುವುದು ಅಭಿಮಾನಕರ ಸಂಗತಿ. ''ವಾರ್ಧಕ ಛಂದಸ್ಸು ಕೋವಿದರಿಗೆ ಬಹುಮೋಹವನ್ನು ಬೀರುವ ಛಂದಸ್ಸು'' ಎಂದು ಕವಿ ಪು. ತಿ. ನ. ಅವರು ತಮ್ಮ ಶುಭಾಶಂಸನದಲ್ಲಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಬ್ರಹ್ಮಜ್ಞಕವಿ ದೇವರಾಯ ಕುಲಕರ್ಣಿಯವರು ತಮ್ಮ 'ಹಾರೈಕೆ' ಯಲ್ಲಿ—''ನಮ್ಮನ್ನು ಈ ಕಾವ್ಯವು ಎಷ್ಟೋ ಸಾವಿರ ವರ್ಷಗಳ ಹಿಂದಿನ ವೈದಿಕ ಸಂಸ್ಕೃತಿಯ ಯುಗಕ್ಕೆ ಕೊಂಡೊಯ್ದು ಅದರ ಘನತೆಯ ದರ್ಶನವನ್ನು ಮಾಡಿಸುತ್ತದೆ" ಎಂದಿದ್ದಾರೆ. ಮುನ್ನುಡಿಯಲ್ಲಿ ವಿದ್ವಾನ್ ತಾಳ್ತಜೆ ಕೃಷ್ಣಭಟ್ಟರು ಈ ಕಾವ್ಯವನ್ನು ಉಲ್ಲೇಖಿಸಿ, "ಈ ಕಾಲದಲ್ಲಿ ಛಂದೋಲಂಕಾರ ಪೂರಿತವಾಗಿ ಬರೆಯುವ ಮನಸ್ಸಿನ ಕೆಲವು ಕವಿಗಳಾದರೂ ಇರುವುದು ನಮ್ಮ ಪುಣ್ಯ" ಎಂದಿದ್ದಾರೆ. ವಿದ್ವಾನ್ ಎನ್. ರಂಗನಾಥ ಶರ್ಮರು ಈ ಕೃತಿಗೆ ನೀಡಿರುವ ಶುಭವಚನಗಳಲ್ಲಿ ಈ ಮಾತಿದೆ—"ಯಾಜ್ಞವಲ್ಕ್ಯ ಮಹಾಮುನಿಗಳ ಬೃಹತ್ ಕಥೆಯನ್ನು ವರ್ಣಿಸಲು ವಾರ್ಧಿಕಷಟ್ಪದಿಯೇ ಉಚಿತವಾದ ಛಂದಸ್ಸು". ಶೃಂಗೇರಿ ಜಗದ್ಗುರುಗಳ ಹಾಗೂ ಕಣ್ವಮಠ ಸಂಸ್ಥಾನದ ಶ್ರೀಗಳವರ ಆಶೀರ್ವಾದ ಅನುಗ್ರಹ ವಾಣಿಗಳಿಂದ ಈ ಕಾವ್ಯಕ್ಕೂ ಕಾವ್ಯಕರ್ತೃವಿಗೂ ಮಹತ್ವ ಬಂದಿದೆ. ಕಥನ ಕಾವ್ಯಗಳನ್ನು ಗಮಕಕ್ಕೆ ಒಪ್ಪುವಂತೆ ಸೊಗಸಾದ ಲಯವಿನ್ಯಾಸದಿಂದ ಭಾಮಿನಿ-ವಾರ್ಧಕಷಟ್ಪದಿಗಳಲ್ಲಿ ರಚಿಸುವ ಸಾಮರ್ಥ್ಯ ಈ ಕವಿಗಿರುವುದು ಮೆಚ್ಚತಕ್ಕ ಸಂಗತಿಯಾಗಿದೆ.

—ಟಿ. ಕೇಶವ ಭಟ್ಟ

---

# ವಸ್ತು ಸಂಗ್ರಹ

**ಸಾಹಿತ್ಯ-ಸಾಂಸ್ಕೃತಿಕ ಸಂಸ್ಥೆಗಳಿಗೆ ಸರ್ಕಾರದ ಪ್ರೋತ್ಸಾಹ:** ಈ ನಾಡಿನಲ್ಲಿ ಸಾಹಿತ್ಯ-ಸಂಸ್ಕೃತಿ ಪೋಷಣೆಗೆ ಹಲವಾರು ಸಂಸ್ಥೆಗಳು ದುಡಿಯುತ್ತಿವೆ. ಅವು ತಮ್ಮದೇ ಆದ ಸಂಪನ್ಮೂಲಗಳನ್ನು ಕ್ರೋಡೀಕರಿಸಿದರೂ ಅಷ್ಟರಿಂದಲೇ ಉದ್ದೇಶಿತ ಕಾರ್ಯಗಳು ಈಡೇರಲಾರವು. ಸರ್ಕಾರ ಅಂಥ ಸಂಸ್ಥೆಗಳಿಗೆ ಸಾಕಷ್ಟು ಹಣ ಬಿಡುಗಡೆ ಮಾಡಿ ತನ್ನ ಪರವಾಗಿ ಈ ಮಹತ್ಕಾರ್ಯವನ್ನು ನಡೆಸುತ್ತಿರುವ ಸಂಘ ಸಂಸ್ಥೆಗಳನ್ನು ಪೋಷಿಸಬೇಕಾದುದು ಅದರ ಕರ್ತವ್ಯವಾಗಬೇಕು.

ಸಾಂದರ್ಭಿಕವಾಗಿ ಇಂಥ ಪೋಷಣೆಯ ಘೋಷಣೆಗಳನ್ನು ಸರ್ಕಾರ ನೀಡುತ್ತಾ ಬಂದಿದೆಯಾದರೂ ಈ ಬಗ್ಗೆ ಒಂದು ನಿಶ್ಚಿತವಾದ ನೀತಿಸಂಹಿತೆಯನ್ನು ರೂಪಿಸಿಲ್ಲ. ಸಭೆ ಸಮಾರಂಭಗಳಲ್ಲಿ ಸಂದರ್ಭಕ್ಕೆ ಅನುಗುಣವಾಗಿ ಘೋಷಿಸಿದರೆ ಸಾಲದು. ಅವುಗಳ ಕಾರ್ಯರೂಪದ ತಂತ್ರಗಳನ್ನೂ ರೂಪಿಸಬೇಕು. ಹಿಂದಿನ ಸರ್ಕಾರ ರಾಜ್ಯೋತ್ಸವ ಸಂದರ್ಭದಲ್ಲಿ ಬೇಂದ್ರೆ, ಕುವೆಂಪು, ಪು.ತಿ.ನ. ಅಧ್ಯಯನ ಕೇಂದ್ರಗಳನ್ನು ಆಯಾ ಕವಿಗಳ ಹುಟ್ಟೂರಿನಲ್ಲಿ ಸ್ಥಾಪಿಸುವುದಾಗಿ ಘೋಷಿಸಿತ್ತು. ಈಚೆಗೆ ತರಂಗ ಪತ್ರಿಕೆ ಪು.ತಿ.ನ. ಅವರ ಮನೆಯ ದುಃಸ್ಥಿತಿಯನ್ನು ಸಚಿತ್ರವಾಗಿ ಪ್ರಕಟಿಸಿದ್ದುದನ್ನು ಗಮನಿಸಿದರೆ ಸರ್ಕಾರದ ಘೋಷಣೆ ಭಾಷಣದ ಮಿತಿಗಷ್ಟೇ ಸೀಮಿತವಾಗಿದ್ದಂತೆ ತೋರುತ್ತದೆ.

ಈಗಿನ ಸರ್ಕಾರ ಮೂಡಬಿದರೆಯಲ್ಲಿ ಜೈನ ಸಾಹಿತ್ಯ ಸಂಶೋಧನ ಕೇಂದ್ರವನ್ನೂ, ಅಬ್ಬಲೂರಿನಲ್ಲಿ ಸರ್ವಜ್ಞ ಸ್ಮಾರಕ ಕೇಂದ್ರವನ್ನೂ ಸ್ಥಾಪಿಸುವುದಾಗಿ ಬೇರೆ ಬೇರೆ ಸಂದರ್ಭಗಳಲ್ಲಿ ಪತ್ರಿಕಾ ಹೇಳಿಕೆಗಳನ್ನು ನೀಡಿದೆ. ಇನ್ನೊಂದು ಸಂದರ್ಭದಲ್ಲಿ ಖಾಸಗಿ ಗ್ರಂಥಾಲಯಗಳಿಗೆ ಅನುದಾನ ಸಂಹಿತೆಯನ್ನು ರಚಿಸಲಾಗುವುದು ಎಂದೂ ತಿಳಿಸಿದೆ. ಇವುಗಳೆಲ್ಲ ಅಗತ್ಯವಾಗಿ ಆಗಬೇಕಾಗಿರುವ ಕಾರ್ಯಗಳು. ಇವುಗಳ ಬಗೆಗೆ ಸರ್ಕಾರ ಕ್ರಿಯಾತ್ಮಕ ನಿರ್ಧಾರಗಳನ್ನು ಕೈಗೊಂಡ ಹೊರತು ಕೇವಲ ಸಾಂದರ್ಭಿಕ ಹೇಳಿಕೆಗಳಾಗಿ ಉಳಿದುಬಿಡುತ್ತವೆ. ಆಳುವ ಪ್ರತಿನಿಧಿಗಳಲ್ಲಿ ಹೇಳಿಕೆಗಳನ್ನು ಜನ ಮೆಚ್ಚಿಕೆಯ ತಂತ್ರಗಳನ್ನಾಗಿ ಬಳಸಿಕೊಳ್ಳುತ್ತಿವೆಯೇನೋ ಎಂಬ ಗುಮಾನಿಗೆ ಕಾರಣವಾಗುತ್ತಿವೆ. ಇಂಥ ಹೇಳಿಕೆಗಳು ಕಾರ್ಯರೂಪಕ್ಕಿಳಿದಿರುವ ಉದಾಹರಣೆಗಳು ಬಹಳ ಕಡಮೆ. ಒಣ ಭರವಸೆಗಳೇ ಹೆಚ್ಚು.

ಪ್ರತಿಷ್ಠಾನವೇ ಅದಕ್ಕೊಂದು ಉದಾಹರಣೆ ಎಂದರೆ ತಪ್ಪಾಗಲಾರದು. 1985 ರಲ್ಲೇ ನಗರ ಸಭೆಯಿಂದ ನಿವೇಶನ ಮಂಜೂರಾಗಿದ್ದರೂ ಈವರೆಗೂ ಪ್ರತಿ

ಷ್ಠಾನಕ್ಕೆ ನೀಡಲಾಗಿಲ್ಲ. ಹತ್ತಾರು ವರ್ಷಗಳಿಂದಲೂ ವಾರ್ಷಿಕ ಅನುದಾನಕ್ಕೆ ವಿನಂತಿಸಲಾಗಿದ್ದರೂ ಈವರೆಗೂ ಲಭ್ಯವಾಗಿಲ್ಲ. ಹಲವಾರು ಸಮಾರಂಭಗಳಲ್ಲಿ ಭೇಟಿ ಮಾಡಿದ್ದ ಸಂದರ್ಭಗಳಲ್ಲಿ ಮಂತ್ರಿ ಮಹೋದಯರು ಭರವಸೆಗಳನ್ನು ನೀಡುತ್ತಲೇ ಬಂದಿದ್ದಾರೆ. ಆದರೆ ಅವೆಲ್ಲ ಭ್ರಮನಿರಸನಗಳಾಗುತ್ತಿವೆ. ಪ್ರಭಾವಿ ವ್ಯಕ್ತಿಗಳಷ್ಟೇ ಸರ್ಕಾರದ ಲಾಭಗಳನ್ನು ಕಬಳಿಸುತ್ತಾರೆ ಎಂದಾದರೆ, ಸಾರ್ಥಕ ಸೇವೆ ಮಾಡುತ್ತಿರುವ ಪ್ರಾಮಾಣಿಕ ಸಂಸ್ಥೆಗಳು ನೆಲಕಚ್ಚಬೇಕಾಗುತ್ತದೆ.

**ಸಾಹಿತ್ಯ ಸಮ್ಮೇಳನ :** ಕೊಪ್ಪಳದಲ್ಲಿ ಫೆಬ್ರವರಿ 5, 6, 7 ರಂದು ನಡೆದ ಮೂರುದಿನಗಳ ಅಖಿಲ ಭಾರತ 63ನೇ ಸಾಹಿತ್ಯ ಸಮ್ಮೇಳನ ಎಂದಿಗಿಂತ ಹೆಚ್ಚು ವಿಜೃಂಭಣೆಯಿಂದ ಅರ್ಥಪೂರ್ಣವಾಗಿ ನಡೆಯಿತು. ಜಾನಪದ ಸಾಹಿತಿ ಸಿಂಪಿ ಲಿಂಗಣ್ಣ ಅವರ ಅಧ್ಯಕ್ಷ ಭಾಷಣ ಸಹಜವಾಗಿ ಜಾನಪದ ಸಾಹಿತ್ಯಕ್ಕೆ ವಿಶೇಷ ಒತ್ತನ್ನು ನೀಡಿದ್ದರೂ ಆ ಮೂಲಕ ಇಡೀ ನಾಡಿನ ಸಾಂಸ್ಕೃತಿಕ ಸಂಪತ್ತಿನ ಪೋಷಣೆಯ ಅಗತ್ಯತೆಯನ್ನು ಪಡಿಮೂಡಿಸುವಂತಿತ್ತು.

ಮೂರು ದಿನಗಳೂ ನಡೆದ ವಿವಿಧ ಗೋಷ್ಠಿಗಳು ಪ್ರಚಲಿತ ಸಾಹಿತ್ಯ-ಸಾಂಸ್ಕೃತಿಕ ವಸ್ತು ವಿಷಯಗಳ ಮನನಕ್ಕೆ ಅವಕಾಶ ಕಲ್ಪಿಸಿದ್ದವು. ಸಂಜೆ ವೇಳೆ ನಡೆದ ಸಂವಾದ ಗೋಷ್ಠಿಗಳು ಅರ್ಥಪೂರ್ಣ ಚರ್ಚೆಗಳಿಂದ ಕೂಡಿದ್ದವು. ಬಹಿರಂಗ ಅಧಿವೇಶನದಲ್ಲಿ ಎಂದಿನಂತೆ ಕನ್ನಡನಾಡು–ನುಡಿಯ ಉಳಿವಿಗೆ ಸಂಬಂಧಿಸಿದಂತೆ ಹಲವಾರು ಮಹತ್ವ ಪೂರ್ಣ ನಿರ್ಣಯಗಳನ್ನು ಕೈಗೊಳ್ಳಲಾಯಿತು. ಈ ನಿರ್ಣಯಗಳನ್ನು ಕಾರ್ಯರೂಪ ಗೊಳಿಸುವತ್ತ ಪರಿಷತ್ತು ಗಂಭೀರವಾದ ಕ್ರಿಯಾತ್ಮಕ ಕಾರ್ಯತಂತ್ರಗಳನ್ನು ರೂಪಿಸು ವತ್ತ ಕಡೆಗೆ ಆಲೋಚಿಸಬೇಕೆಂದು ಪ್ರತಿಷ್ಠಾನ ಹಿಂದಿನಿಂದಲೂ ಹೇಳಿಕೊಂಡು ಬರುತ್ತಿದೆ.

## ಕೆಲವು ಮಹತ್ವದ ಪುಸ್ತಕಗಳ ಬಿಡುಗಡೆ

೧. **ವಚನ ಸಾಹಿತ್ಯ ಸಂಪುಟ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಲವಾರು ಮೌಲಿಕ ಪ್ರಕಟನೆಗಳನ್ನು ಹೊರತರುತ್ತಿದ್ದು ಏಪ್ರಿಲ್‌ನಲ್ಲಿ ಸಮಗ್ರ ವಚನ ಸಾಹಿತ್ಯ ಸಂಪುಟಗಳನ್ನು ಬಿಡುಗಡೆ ಮಾಡಿದೆ. ಡಾ॥ ಎಂ. ಎಂ. ಕಲಬುರ್ಗಿ ಅವರ ಸಂಪಾದಕತ್ವದಲ್ಲಿ ಹದಿನೈದು ಸಂಪುಟಗಳಲ್ಲಿ ಹತ್ತುಸಾವಿರ ಪುಟಗಳಲ್ಲಿ ಒಟ್ಟು ಇಪ್ಪತ್ತೊಂದು ಸಾವಿರ ವಚನಗಳು ಅಡಕವಾಗಿವೆ ಎಂದು ಹೇಳಲಾಗಿದೆ. ಇದೊಂದು ಅತ್ಯಂತ ಮಹತ್ವದ ಪ್ರಕಟನೆಯಾಗಿದೆ. ಸರ್ಕಾರದ ಇಂಥ ಮೌಲಿಕ ಯೋಜನೆಗಳು ತುಂಬ ನಿಧಾನಗತಿಯಲ್ಲಿ ಸಾಗುತ್ತಿರುವುದು ಶೋಚನೀಯ. ಯಾವ ತೊಡಕೂ ಇಲ್ಲದ ಸರ್ಕಾರದ ಯೋಜನೆಗಳೇ ಹೀಗೆ ಎಡವಿದರೆ ಖಾಸಗಿ ಸಂಸ್ಥೆಗಳ ಯೋಜನೆಗಳ ಗತಿಯೇನು? ಆದರೆ ಖಾಸಗಿ ಯೋಜನೆಗಳು ಹಲವಾರು ತೊಡಕುಗಳ

ನಡುವೆಯೂ ಸಾಧ್ಯವಾದಷ್ಟು ಶೀಘ್ರವಾಗಿ ಪೂರ್ಣಗೊಳ್ಳುತ್ತಿವೆ ಎಂಬುದನ್ನು ಸರ್ಕಾರ ಗಮನಿಸಬೇಕು. ಇಲಾಖೆಯಲ್ಲಿ ಅಸಮಗ್ರವಾಗಿರುವ ಕನಕ ಸಾಹಿತ್ಯ ಸಂಪುಟಗಳ ಮತ್ತು ಡಿ.ವಿ.ಜಿ. ಕೃತಿಶ್ರೇಣಿಯ ಸಂಪುಟಗಳ ಪ್ರಕಟನೆ ಪಂಪ ಪ್ರಶಸ್ತಿ ವಿಜೇತ ಕೃತಿಗಳ ಪ್ರಕಟನೆಗಳು ಆದಷ್ಟು ಬೇಗ ಜನತೆಗೆ ತಲುಪುವಂತಾಗಲಿ ಎಂದು ಪ್ರತಿಷ್ಠಾನ ಬಯಸುತ್ತದೆ.

೨. **ಪರಿವಿಡಿ ಮತ್ತು ಸಿರಿಗನ್ನಡ :** ಕನ್ನಡ ವಿಶ್ವವಿದ್ಯಾಲಯ ಅತಿಶೀಘ್ರವಾಗಿ ಬೆಳೆಯುತ್ತಿರುವ ಹಂತದಲ್ಲಿ 'ಪರಿವಿಡಿ' ಎಂಬ ಪುಸ್ತಕಗಳ ಪ್ರಕಾಶನ, ವಿಮರ್ಶೆ-ಸೂಚಿ ಇತ್ಯಾದಿ ಪುಸ್ತಕೋದ್ಯಮಕ್ಕೆ ಸಂಬಂಧಿಸಿದ ಮಾಸಿಕ ಹಾಗೂ 'ಸಿರಿಗನ್ನಡ' ಎಂಬ ಸಾಹಿತ್ಯ ಷಾಣ್ಮಾಸಿಕವನ್ನು ಆರಂಭಿಸಿದೆ. ಪುಸ್ತಕೋದ್ಯಮಕ್ಕೆ ಸಂಬಂಧಿಸಿದಂತೆ ಇದ್ದ ಒಂದೇ ಪತ್ರಿಕೆ 'ಗ್ರಂಥಲೋಕ'ವೂ ನಿಂತುಹೋದ ಮೇಲೆ ಆ ಶೂನ್ಯವನ್ನು ತುಂಬಲು ಪರಿವಿಡಿ ಅತ್ಯಗತ್ಯವಾಗಿದೆ. ವಿಶ್ವವಿದ್ಯಾನಿಲಯ ಈ ಪತ್ರಿಕೆಗಳನ್ನು ಕೇವಲ ಚಂದಾದಾರರಿಗಷ್ಟೇ ವಿತರಿಸುವುದರ ಬದಲು ಕೆಲವು ಪ್ರಮುಖ ಸಾಹಿತ್ಯ ಸಂಸ್ಥೆಗಳಿಗೂ ಈಗಾಗಲೆ ಅಂಥ ಪತ್ರಿಕೆಗಳನ್ನು ಪ್ರಕಟಿಸುತ್ತಿರುವ ಸಂಸ್ಥೆಗಳಿಗೆ ವಿನಿಮಯವಾಗಿಯೂ ನೀಡುವುದರ ಮೂಲಕ ಪತ್ರಿಕೆಗಳನ್ನು ಹೆಚ್ಚು ಜನರ ಆಸಕ್ತ ಓದುಗರ ಗಮನಕ್ಕೆ ತರುವತ್ತ ಆಲೋಚಿಸಬೇಕಾಗಿದೆ.

೩. **ಕೊಡಗು ಗೆಜೆಟಿಯರ್ :** ಕರ್ನಾಟಕ ಗೆಜೆಟಿಯರ್ ಇಲಾಖೆ ಈ ಮೊದಲೇ ಪ್ರಕಟಿಸಿದ್ದ ಪ್ರಥಮ ಪರಿಷ್ಕೃತ ಕನ್ನಡ ಆವೃತ್ತಿಯ ಜೊತೆಗೆ ಮೇ ತಿಂಗಳಲ್ಲಿ ಇಂಗ್ಲಿಷ್‌ನ ಪರಿಷ್ಕೃತ ಆವೃತ್ತಿಯನ್ನು ಬಿಡುಗಡೆ ಮಾಡಿದೆ. ಕರ್ನಾಟಕದ ಸಂಸ್ಕೃತಿ ಮತ್ತು ಇತಿಹಾಸದ ಪುನಾರಚನೆಗೆ ಮತ್ತು ಪ್ರಚಲಿತ ವಿಷಯಗಳಿಗೆ ಕೈಪಿಡಿಯಂತಿರುವ ಗೆಜೆಟಿಯರ್ ಪ್ರಕಟನೆ ಬಹಳ ಮಹತ್ವಪೂರ್ಣವಾದುದು. ಡಾ॥ ಸೂರ್ಯನಾಥ ಕಾಮತ್ ಅವರ ಸಂಪಾದಕತ್ವದಲ್ಲಿ ಸಾಕಷ್ಟು ಉತ್ತಮ ಕೆಲಸ ಮಾಡಿರುವ ಗೆಜೆಟಿಯರ್ ಇಲಾಖೆ ಸಾಧ್ಯವಾದಷ್ಟು ಬೇಗ ಎಲ್ಲ ಜಿಲ್ಲೆಗಳ ಪರಿಷ್ಕೃತ ಆವೃತ್ತಿಯನ್ನು ಪ್ರಕಟಿಸುವಂತಾಗಲಿ ಎಂದು ಪ್ರತಿಷ್ಠಾನ ಆಶಿಸುತ್ತದೆ. ಸರ್ಕಾರವೇ ನೇರವಾಗಿ ಪ್ರಕಟಿಸುತ್ತಿರುವ ಈ ಸಂಪುಟಗಳನ್ನು ಪ್ರಮುಖ ಗ್ರಂಥಾಲಯಗಳಿಗೆ ಮತ್ತು ಸಂಸ್ಥೆಗಳಿಗೆ ಉಚಿತವಾಗಿ ವಿತರಿಸುವ ಬಗ್ಗೆ ಸರ್ಕಾರ ಆಲೋಚಿಸಬೇಕೆಂದು ಈ ಸಂದರ್ಭದಲ್ಲಿ ಪ್ರತಿಷ್ಠಾನ ಸೂಚಿಸಬಿಚ್ಛಿಸುತ್ತದೆ.

೪. **ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಸಮೀಕ್ಷೆ :** ನಗರದ ಉದಯಭಾನು ಕಲಾ ಸಂಘ ಈ ಉಪಯುಕ್ತ ಪುಸ್ತಕವನ್ನು ಪ್ರಕಟಿಸಿದೆ. ಪ್ರೊ. ಎಲ್. ಎಸ್. ಶೇಷಗಿರಿ ರಾವ್ ಅವರ ಪ್ರಧಾನ ಸಂಪಾದಕತ್ವದಲ್ಲಿ ಪ್ರೊ. ಎಂ. ಹೆಚ್. ಕೃಷ್ಣಯ್ಯ ಮತ್ತು ಡಾ. ವಿಜಯ ಅವರು ಸಂಪಾದಿಸಿರುವ ಈ

ಸಂಪುಟ ಸಂಘದ ರಜತೋತ್ಸವ ನೆನಪಿನ ಪ್ರಕಟನೆ. ಸಣ್ಣ ಪ್ರಮಾಣದ, ಬಡಾವಣೆಯ ಮಿತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಯೊಂದು ಬೃಹತ್ಪ್ರಮಾಣದ ಪ್ರಾತಿನಿಧಿಕ ಸಾಹಿತ್ಯ ಕೃತಿಯೊಂದನ್ನು ಪ್ರಕಟಿಸಿರುವ ಉದಾಹರಣೆ ಇಲ್ಲ. ಆ ಕೀರ್ತಿ ಉದಯಭಾನು ಕಲಾ ಸಂಘಕ್ಕೆ ಸಲ್ಲುತ್ತದೆ. ಇದೇ ಸಂಘ ಹಿಂದೆ ಪ್ರೊ. ಎಂ. ವಿ. ಸೀತಾರಾಮಯ್ಯನವರ ಅಭಿನಂದನ ಗ್ರಂಥವನ್ನೂ ಪ್ರಕಟಿಸಿದ್ದುದನ್ನು ಇಲ್ಲಿ ನೆನೆಯಬಹುದು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕನ್ನಡ ಸಾಹಿತ್ಯ-ಸಂಸ್ಕೃತಿ ಮತ್ತು ವಿವಿಧ ಕ್ಷೇತ್ರಗಳು ಹೇಗೆ ಬೆಳೆದು ಬಂದಿವೆಯೆಂಬುದರ ಬಗೆಗೆ ವಿಮರ್ಶೆ, ವಿಶ್ಲೇಷಣೆಗಳಿಂದ ಕೂಡಿದ ಸಮೀಕ್ಷಾ ಲೇಖನಗಳು ಈ ಕೃತಿಯಲ್ಲಿದ್ದು ಬಹಳ ಮೌಲಿಕ ಪ್ರಕಟನೆಯಾಗಿದೆ.

---

## ಪ್ರತಿಷ್ಠಾನ ವಾರ್ತೆ

೧. **ಶ್ರದ್ಧಾಂಜಲಿ ಕಾರ್ಯಕ್ರಮ :** ಪ್ರತಿಷ್ಠಾನದ ಕೋಶಾಧಿಕಾರಿಗಳಾಗಿ ಕಾರ್ಯನಿರ್ವಹಿಸಿದ್ದ ಶ್ರೀ ಕೈವಾರ ರಾಜಾರಾವ್ ಅವರಿಗೆ ಮತ್ತು ಗೌರವ ಸದಸ್ಯರಾಗಿದ್ದ ಡಾ॥ ರಂ. ಶ್ರೀ. ಮುಗಳಿ ಅವರಿಗೆ ಪ್ರತಿಷ್ಠಾನ ತನ್ನ ಗೌರವ ನಮನಗಳನ್ನರ್ಪಿಸಲು ಶ್ರದ್ಧಾಂಜಲಿ ಕಾರ್ಯಕ್ರಮಗಳನ್ನು ನಡೆಸಿತು. 2-2-1993 ರಂದು ನಡೆದ ಕೆ. ರಾಜಾರಾವ್ ಶ್ರದ್ಧಾಂಜಲಿಯಲ್ಲಿ ಸರ್ವಶ್ರೀ ನಿಟ್ಟೂರು ಶ್ರೀನಿವಾಸರಾವ್, ಎನ್. ಬಸವಾರಾಧ್ಯ, ಜಿ. ನಾರಾಯಣ, ಸಿ. ಕೆ. ನಾಗರಾಜರಾವ್, ಎಸ್. ನಾಗೇಶರಾವ್ ಮತ್ತು ಆರ್. ಎಸ್. ರಾಮರಾವ್ ಅವರುಗಳು ಮಾತನಾಡಿದರು. 19-3-1993 ರಂದು ನಡೆದ ಡಾ॥ ರಂ. ಶ್ರೀ. ಮುಗಳಿ ಶ್ರದ್ಧಾಂಜಲಿಯಲ್ಲಿ ಸರ್ವಶ್ರೀ ನಿಟ್ಟೂರು ಶ್ರೀನಿವಾಸ ರಾವ್, ಎನ್. ಬಸವಾರಾಧ್ಯ, ಎಂ. ಚಿದಾನಂದ ಮೂರ್ತಿ ಮತ್ತು ಅ. ರಾ. ಮಿತ್ರ ಅವರು ಮಾತನಾಡಿದರು.

೨. **ದತ್ತಿ ಉಪನ್ಯಾಸ :** 22-5-1993 ರಂದು ಜಯನಗರ ಕ್ಷೇತ್ರ ಕನ್ನಡ ಸಾಹಿತ್ಯ ಪರಿಷತ್ತಿನ ಸಹಯೋಗದಲ್ಲಿ ಬಿ. ಎಂ. ಶ್ರೀ. ಸ್ಮಾರಕ ದತ್ತಿ ಉಪನ್ಯಾಸವಾಗಿ ಡಾ॥ ಪಿ. ವಿ. ನಾರಾಯಣ ಅವರು 'ಕನ್ನಡ ಚಂಪೂ ಕೆಲವು ಚಿಂತನೆಗಳು' ವಿಷಯವಾಗಿ ಮಾತನಾಡಿದರು.

೩. **ವಿ.ಸೀ. ದತ್ತಿ ನಿಧಿ ಸ್ಥಾಪನೆ :** ವಿ.ಸೀ. ಅವರ ಅಪ್ರಕಟಿತ ಹಸ್ತಪ್ರತಿ 'ಸಂವಿಧಾನ ಮತ್ತು ಕಾನೂನು' ಗ್ರಂಥವನ್ನು ಪ್ರತಿಷ್ಠಾನ ತನ್ನ ದಶಮಾನೋತ್ಸವ ಮಾಲೆಯಲ್ಲಿ ಪ್ರಕಟಿಸಿ 22-7-1993 ರಂದು ಬಿಡುಗಡೆ ಮಾಡಿದ ಸಂದರ್ಭದಲ್ಲಿ

ವಿ. ಸೀ. ಸಂಪದ ಮತ್ತು ವಿ. ಸೀ. ಯವರ ಮಕ್ಕಳು ಈ ನೂತನ ದತ್ತಿಯನ್ನು ಪ್ರತಿಷ್ಠಾನದಲ್ಲ ಸ್ಥಾಪಿಸಿದರು. ಈ ಮೊದಲೇ ಪ್ರೊ. ಎಂ. ವಿ. ಸತ್ಯನಾರಾಯಣ ಅವರು ಈ ದತ್ತಿ ನಿಧಿಯನ್ನು ಆರಂಭ ಮಾಡಿದ್ದರು. ಪ್ರತಿವರ್ಷ ಅಕ್ಟೋಬರ್ ತಿಂಗಳಿನಲ್ಲಿ ವಿ. ಸೀ. ಅವರ ಮತ್ತು ಅವರಿಗೆ ಪ್ರಿಯವಾಗಿದ್ದ ಸಾಹಿತ್ಯವನ್ನು ಕುರಿತು ಉಪನ್ಯಾಸಗಳನ್ನು ಏರ್ಪಡಿಸಬಹುದೆಂಬ ಉದ್ದೇಶಕ್ಕಾಗಿ ದಾತೃಗಳು ಒಟ್ಟು ಐದು ಸಾವಿರ ರೂ.ಗಳನ್ನು ನೀಡಿದ್ದಾರೆ. ಇದೇ ಸಂದರ್ಭದಲ್ಲಿ ಪ್ರೊ. ಅ. ರಾ. ಮಿತ್ರ ಅವರು ವಿ. ಸೀ. ಸಂಸ್ಮರಣ ಉಪನ್ಯಾಸ ನೀಡಿದರು.

೪. **ಎಂ.ವಿ.ಸೀ. ಸಂಸ್ಮರಣೆ ಮತ್ತು ಹಸ್ತಪ್ರತಿ ಶಾಸ್ತ್ರ ತರಗತಿ ಅರ್ಹತಾ ಪತ್ರ ವಿತರಣೆ:** ದಿನಾಂಕ 22-3-1993 ರಂದು ಸಂಸ್ಥಾಪಕ ಎಂ. ವಿ. ಸೀತಾ ರಾಮಯ್ಯನವರ ಜನ್ಮದಿನದ ಸಂಸ್ಮರಣಾರ್ಥ ನಡೆದ ಕಾರ್ಯಕ್ರಮದಲ್ಲಿ 'ಎಂ. ವಿ. ಸೀ. ಸಂಸ್ಮರಣೆ' ಎಂಬ ಪುಸ್ತಕವನ್ನು ಡಾ|| ಜಿ. ಎಸ್. ಗಾಯ್ ಅವರು ಬಿಡುಗಡೆ ಮಾಡಿದರು. ಜೊತೆಗೆ ಪ್ರತಿಷ್ಠಾನ ನಡೆಸಿದ ಮೂರನೇ ತಂಡದ ಹಸ್ತಪ್ರತಿ ಶಾಸ್ತ್ರ ತರಗತಿ ವಿದ್ಯಾರ್ಥಿಗಳಿಗೆ ಅರ್ಹತಾ ಪತ್ರಗಳನ್ನು ವಿತರಿಸಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನೆರವಿನೊಂದಿಗೆ ಶ್ರೀಮತಿ ಜಯಪಾರ್ಥಸಾರಥಿ ಮತ್ತು ತಂಡದವರು ಎಂ. ವಿ. ಸೀ. ಅವರ ಭಾವಗೀತಗಳನ್ನು ಹಾಡಿದರು.

೫. **ಸಹೃದಯಗೋಷ್ಠಿ:** 21-1-1993 ರಂದು ಅ. ರಾ. ಮಿತ್ರ ಅವರಿಂದ 'ಅಡಿಗರ ಛಂದಸ್ಸು' ವಿಷಯವಾಗಿಯೂ 26-2-1993 ರಂದು ಶ್ರೀ ಚಂದ್ರಶೇಖರ್ ಅವರು 'ಗೋಕಾಕರ ಕಾದಂಬರಿ' ವಿಷಯವಾಗಿಯೂ 22-6-1993 ರಂದು ಬಸವರಾಜಪ್ಪ ಅವರಿಂದ ಸ್ವರಚಿತ ಕವನ ವಾಚನವೂ ಸಹೃದಯಗೋಷ್ಠಿಯ ತಿಂಗಳ ಕಾರ್ಯಕ್ರಮಗಳಲ್ಲಿ ನಡೆದವು.

---

## ಅಭಿನಂದನೆ

**ಎಸ್. ಕೆ. ಕರೀಂಖಾನ್**

ಜಾನಪದ ಜಗತ್ತಿನ ಹಿರಿಯ ವಿದ್ವಾಂಸರಾದ ಎಸ್.ಕೆ. ಕರೀಂಖಾನ್ ಸೇರಿದಂತೆ ಜಾನಪದ ಕ್ಷೇತ್ರಕ್ಕೆ ವಿಶಿಷ್ಟಸೇವೆಯ ಕೊಡುಗೆ ಸಲ್ಲಿಸಿದ ೨೩ ಮಂದಿಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ೧೯೯೨ ನೆಯ ವರ್ಷದ ಪ್ರಶಸ್ತಿಗಳನ್ನು ನೀಡಿ, ಗೌರವಿಸಿದೆ. ಕರೀಂಖಾನರನ್ನು ಅಕಾಡೆಮಿಯ ವಿಶೇಷ ಪ್ರಶಸ್ತಿಗೆ ಆಯ್ಕೆ

ಮಾಡಲಾಗಿದೆ. ಹೀಗೆ ವಿಶೇಷ ಪ್ರಶಸ್ತಿ ನೀಡುವುದು ಇದೇ ಮೊದಲು. ಜಾನಪದ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ಮತ್ತು ಮಾಡಿರುವ ಸಾಧನೆಯನ್ನು ಲಕ್ಷಿಸಿ ಡಾ|| ಚಂದ್ರಶೇಖರ ಕಂಬಾರ ಹಾಗೂ ಮುದೇನೂರ ಸಂಗಣ್ಣ ಅವರಿಗೂ ಪ್ರಶಸ್ತಿ ನೀಡಲಾಗಿದೆ. ಪ್ರಶಸ್ತಿ ಪಡೆದವರೆಲ್ಲರಿಗೂ ಪ್ರತಿಷ್ಠಾನದ ಅಭಿನಂದನೆಗಳು ಮುಡಿಪಾಗಿವೆ.

## ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು

ವಿಮರ್ಶಕ ಡಾ|| ಗಿರಡ್ಡಿ ಗೋವಿಂದರಾಜ್, ಪ್ರಗತಿಶೀಲ ಸಾಹಿತಿ ಶ್ರೀ ಕುಮಾರ ವೆಂಕಣ್ಣ, ಅನುವಾದ ಮತ್ತು ಕಥಾ ಸಾಹಿತ್ಯದ ಶ್ರೀಮತಿ ಹೆಚ್. ಎಸ್. ಪಾರ್ವತಿ, ಕಾದಂಬರಿ ಮತ್ತು ಕಾವ್ಯದ ಚಂದ್ರಕಾಂತ ಕುಸನೂರ, ಸಾಹಿತ್ಯ ಮತ್ತು ಅನುವಾದ ರಚನೆಯಲ್ಲಿ ಹೆಸರಾಂತ ಶ್ರೀ ಪಿ. ವಿ. ವಜ್ರಮಟ್ಟಿ—ಇವರಿಗೆ ೧೯೯೨ ನೆಯ ವರ್ಷದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಸಂದಿದೆ.

ಸಾಹಿತ್ಯ ಅಕಾಡೆಮಿಯ ೧೯೯೦-೯೧ ನೆಯ ವರ್ಷದ ಬಹುಮಾನಗಳೂ ಇದೇ ವರ್ಷ ಸಂದಾಯವಾಗಿವೆ. ಪಿ. ಲಂಕೇಶ್ ಅವರ ಸೃಜನಶೀಲ ಕೃತಿ "ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು", ಪ್ರೊ. ಎ. ಎನ್. ಮೂರ್ತಿರಾಯರ ಸೃಜನೇತರ ಕೃತಿ—"ಸಂಜೆಗಣ್ಣಿನ ಹಿನ್ನೋಟ", ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಯವರ ಸೃಜನಶೀಲ ಕೃತಿ— "ಕಿರಗೂರಿನ ಗಯ್ಯಾಳಿಗಳು" ಕೆ. ಎಸ್. ನಿಸಾರ ಅಹಮದ್ ಅವರ ಸೃಜನೇತರ ಕೃತಿ—"ಮನದೊಂದಿಗೆ ಮಾತುಕತೆ"—ಇವು ವಿಶೇಷ ಬಹುಮಾನಿತವಾಗಿವೆ. ಇವಲ್ಲದೆ, ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳ ಒಂದೊಂದು ಉತ್ತಮ ಕೃತಿಗಳಿಗೂ ವಾರ್ಷಿಕ ಪ್ರಶಸ್ತಿಗಳನ್ನು ಘೋಷಿಸಲಾಗಿದೆ. ಅವುಗಳಲ್ಲಿ ದಿವಂಗತ ಎಂ.ವಿ. ಸೀತಾರಾಮಯ್ಯನವರ 'ಪ್ರತಿಮಾಗೃಹ' ಕೃತಿಗೂ ಪ್ರಶಸ್ತಿ ಲಭಿಸಿದೆ.

## ಕನಕ - ಪುರಂದರ ಪ್ರಶಸ್ತಿ

ಕರ್ನಾಟಕ ಸಂಗೀತ ಕ್ಷೇತ್ರಕ್ಕೆ ಅಪ್ರತಿಮ ಸೇವೆ ಸಲ್ಲಿಸಿರುವ ಪುರಂದರದಾಸರು ಮತ್ತು ಕನಕದಾಸರು - ಇವರ ಹೆಸರಿನಲ್ಲಿ ಕರ್ನಾಟಕ ಸರ್ಕಾರ ಸ್ಥಾಪಿಸಿರುವ ಒಂದು ಲಕ್ಷ ರೂ.ಗಳನ್ನೊಳಗೊಂಡ ಈ ಪ್ರಶಸ್ತಿಯನ್ನು ಪಡೆದ ಮೊದಲಿಗರಾಗಿ ತಿಟ್ಟೆ ಕೃಷ್ಣಯ್ಯಂಗಾರ್ ಎಲ್ಲ ಕನ್ನಡಿಗರ ಅಭಿಮಾನಕ್ಕೆ ಪಾತ್ರರಾಗಿದ್ದಾರೆ. ಮೈಸೂರು ಅರಸರ ಆಸ್ಥಾನ ವಿದ್ವಾಂಸರಾದ ತೊಂಬತ್ತು ವರ್ಷದ ತಿಟ್ಟೆಯವರು ಲೋಕಕ್ಕೆ ಸಂಸ್ಕೃತಿ ಸಂಪತ್ತನ್ನು ಸಂಗೀತದ ಮೂಲಕ ನೀಡುತ್ತ ಬಂದಿದ್ದಾರೆ.

## ಸುವರ್ಣ ಪ್ರಶಸ್ತಿ

ಭಾಷೆಗೆ ಮತ್ತು ಲಲಿತಕಲೆಗಳಿಗೆ ಮೈಸೂರು ವಿಶ್ವವಿದ್ಯಾನಿಲಯ ನೀಡುವ ಸುವರ್ಣ ಮಹೋತ್ಸವ ಪ್ರಶಸ್ತಿ ಈ ವರ್ಷ ನಾಲ್ಕು ಮಂದಿ ವಿದ್ವಾಂಸರಿಗೆ ಸಂದಿದೆ. ಡಾ|| ಎಲ್. ಬಸವರಾಜು ಅವರು ರಚಿಸಿರುವ 'ಕೇಶಿರಾಜ ವಿರಚಿತ ಶಬ್ದಮಣಿದರ್ಪಣ', ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರಿಯವರ "ಕನ್ನಡ ಚಿತ್ರಕಾವ್ಯ", ಡಾ|| ಆರ್. ಸತ್ಯನಾರಾಯಣ ಅವರ ಸಂಗೀತ ಗ್ರಂಥ— "ಮ್ಯೂಸಿಕ್ ಆಫ್ ಮಾಡರ್ನ್ ಮಾಂಕ್ಸ್ ಆಫ್ ಕರ್ನಾಟಕ". ಡಾ|| ಪ್ರಧಾನ ಗುರುದತ್ತರ "ಭಾಷಾಂತರ ಕಲೆ" (ಇದು ಪ್ರತಿಷ್ಠಾನದ ಪ್ರಕಟನೆ) ಕೃತಿಗಳು ಬಹುಮಾನಗಳನ್ನು ಪಡೆದಿದೆ.

## ಕುವೆಂಪು ಅವರಿಗೆ ಗೌ|| ಡಾಕ್ಟರೇಟ್

ಸಾಹಿತ್ಯ ಕ್ಷೇತ್ರದಲ್ಲಿ ನೀಡಲಾಗುವ ಸಮಸ್ತ ಗೌರವ–ಪ್ರಶಸ್ತಿಗಳನ್ನು ಮೀರಿ ನಿಂತಿರುವ ರಸಋಷಿ ಡಾ|| ಕುವೆಂಪು ಅವರಿಗೆ ಕುವೆಂಪು ವಿಶ್ವವಿದ್ಯಾಲಯ ೧೯೯೩ ಮಾರ್ಚಿಯಲ್ಲಿ ಗೌ|| ಡಿ. ಲಿಟ್ ಪದವಿಯನ್ನು ನೀಡಿ ಗೌರವಿಸಿದೆ. ಕುವೆಂಪು ವಿಶ್ವವಿದ್ಯಾಲಯದ ಕುಲಪತಿ ಪ್ರೊ. ಎಂ. ಆರ್. ಗಜೇಂದ್ರಗಡ ಅವರು ಕುವೆಂಪು ಅವರ ನಿವಾಸ 'ಉದಯರವಿ' ಯಲ್ಲಿ ೨೨-೩-೧೯೯೩ ರಂದು ಹಲವರು ಗಣ್ಯರ ಸಮ್ಮುಖದಲ್ಲಿ ಈ ಗೌರವ ಪದವಿಯನ್ನು ಕೃತಜ್ಞತಾಪೂರ್ವಕ ಸಲ್ಲಿಸಿದರು.

## ಕಾವ್ಯಾನಂದ ಪುರಸ್ಕಾರ

೧೯೯೨ನೇ ವರ್ಷದ ಕಾವ್ಯಾನಂದ ಪುರಸ್ಕಾರ ಶ್ರೀ ಎಸ್. ವೆಂಕಟವಿಶ್ವನಾಥ (ಹರಿಹರ ಪ್ರಿಯ) ಅವರ "ಬಂಡಾಯ ಮನೋಧರ್ಮ" ಎಂಬ ಕೃತಿಗೆ ನೀಡಲಾಗಿದೆ. ಕನ್ನಡ ಸಾಹಿತ್ಯ ಸಂವರ್ಧಕ ಟ್ರಸ್ಟ್ ನೀಡುವ ಈ ಪುರಸ್ಕಾರ ವಚನ ಸಾಹಿತ್ಯಕ್ಕೆ ನೀಡುವಂತಹದಾಗಿದ್ದರೂ ಅಂತಹ ಪುರಸ್ಕಾರಾರ್ಹ ಕೃತಿ ಬರಲಿಲ್ಲವಾದ್ದರಿಂದ ಅದನ್ನು ಬೇರೆ ಬಗೆಯ ಸಾಹಿತ್ಯಕ್ಕೆ ನೀಡುವುದೆಂದು ಟ್ರಸ್ಟಿನ ಅಧ್ಯಕ್ಷ ಹಾಗೂ ಖ್ಯಾತ ಸಾಹಿತಿ ಡಾ|| ಸಿದ್ಧಯ್ಯ ಪುರಾಣಿಕರು ತಿಳಿಸಿರುತ್ತಾರೆ.

## ಚಿದಾನಂದ ಪ್ರಶಸ್ತಿ

ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ದಿನಾಂಕ ೧೫-೬-೧೯೯೩ ರಂದು, ಸಂಶೋಧಕ, ಸಾಹಿತಿ, ನಿವೃತ್ತ ಪ್ರಾಧ್ಯಾಪಕ, ಹಾಗೂ ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷ ಡಾ|| ಚಿದಾನಂದ ಮೂರ್ತಿಯವರ ಹೆಸರಿನಲ್ಲಿ ಡಾ|| ಚಿದಾನಂದಮೂರ್ತಿ ಅಭಿನಂದನ ಸಮಿತಿಯು ಸ್ಥಾಪಿಸಿರುವ "ಚಿದಾನಂದ ಪ್ರಶಸ್ತಿ"ಯನ್ನು ಡಾ|| ಜಿ. ಎಸ್. ಗಾಯಿ ಅವರಿಗೆ ವಿತರಿಸಲಾಯಿತು. ೧೯೯೨-೯೩ ನೆಯ ವರ್ಷದ

ಈ ಪ್ರಶಸ್ತಿಯನ್ನು ಪಡೆದ ಹಿರಿಯ ಸಂಶೋಧಕ ಡಾ|| ಗೋವಿಂದರಾವ್, ಸ್ವಾಮಿರಾವ್ ಗಾಯಿ ನಾಣ್ಯ, ಶಾಸನ, ಪಳೆಯುಳಿಕೆಗಳನ್ನು ಬಳಸಿಕೊಂಡು ಅವರು ನಿಃಸ್ವಾರ್ಥವಾಗಿ ಸಮಾಜದ ಏಳಿಗೆಗೆ ದುಡಿಯುತ್ತ ಎಂದಿಗೂ ಅಳಿಸಿಹೋಗದ ಕೆಲಸ ಮಾಡಿ ಮುಂದಿನ ಸಂಶೋಧಕರಿಗೆ ದಾರಿಗಾಣಿಸುತ್ತಿರುವವರು. ಡಾ|| ಗಾಯಿ ಅವರು ಪ್ರತಿಷ್ಠಾನದ ಗೌರವ ಸದಸ್ಯರೂ ಹೌದು.

ಈ ಎಲ್ಲ ಮಾನ್ಯರಿಗೂ ಪ್ರತಿಷ್ಠಾನ ತನ್ನ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸುತ್ತದೆ.

---

# ಶ್ರದ್ಧಾಂಜಲಿ

## ರಸಿಕ ಪುತ್ತಿಗೆ

ಸಾರಸ್ವತ ಕ್ಷೇತ್ರದಲ್ಲಿ ರಸಿಕಪುತ್ತಿಗೆ ಎಂತಲೇ ಖ್ಯಾತರಾದ ಪಿ. ಸುಬ್ರಹ್ಮಣ್ಯ ಆಚಾರ್ ಅವರು ೭-೨-೧೯೯೩ ರಂದು ಕಾಲವಶರಾದರು. ದ. ಕ. ಜಿಲ್ಲೆಯ ಕಾರ್ಕಳ ತಾಲೂಕಿನ ಪುತ್ತಿಗೆಯಲ್ಲಿ ೧೯೩೨ ರಲ್ಲಿ ಜನಿಸಿದ ಇವರು ಹಿಂದೀ ಅಧ್ಯಾಪಕರಾಗಿದ್ದರು. ಕನ್ನಡದಲ್ಲಿ ಎಂ.ಎ. ಪದವೀಧರರೂ ಆಗಿದ್ದರು. ಅಧ್ಯಾಪಕ ವೃತ್ತಿಯೊಂದಿಗೆ ಲೇಖನ, ಉಪನ್ಯಾಸಗಳು ಇವರ ಹವ್ಯಾಸಗಳು. ಮಕ್ಕಳಿಗಾಗಿ ಕಥೆ, ನಾಟಕ, ಕಾದಂಬರಿ, ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ಇವರ ‘ಕೆಂಪು ಕಾರು’ ಕಾದಂಬರಿಗೆ ರಾಷ್ಟ್ರೀಯ ಪ್ರಶಸ್ತಿ ದೊರಕಿದೆ. ವಿಕ್ರಮ ವಾರ ಪತ್ರಿಕೆಯಲ್ಲಿ ‘ಬಲ್ಲಿರೇನಯ್ಯಾ’ ಎಂಬ ಶೀರ್ಷಿಕೆಯ ಮೂಲಕ ಚಿರಪರಿಚಿತರಾಗಿದ್ದರು.

## ಡಾ|| ರಂ. ಶ್ರೀ. ಮುಗಳಿ

ಕನ್ನಡದಲ್ಲಿ ಅಗ್ರಮಾನ್ಯ ಸಾಹಿತಿಗಳೂ, ಸಂಶೋಧಕರೂ, ಸಾಹಿತ್ಯ ಚರಿತ್ರಕಾರರೂ, ಕವಿಯೂ ಆದ ರಂ. ಶ್ರೀ. ಮುಗಳಿಯವರು ೨೦-೩-೧೯೯೩ ರಂದು ನಮ್ಮನ್ನಗಲಿದ್ದಾರೆ. ಧಾರವಾಡ ಜಿಲ್ಲೆಯ ಹೊಳೆ ಆಲೂರು ಗ್ರಾಮದಲ್ಲಿ ೧೯೦೬ ರಲ್ಲಿ ಇವರ ಜನನ. ಪುಣೆ ವಿಶ್ವವಿದ್ಯಾಲಯದಿಂದ ಗೌ|| ಡಾಕ್ಟರೇಟ್, ರಾಜ್ಯದ ಮತ್ತು ಕೇಂದ್ರದ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಇವರಿಗೆ ಬಂದಿದೆ. ಸಿದ್ಧಗಂಗೆಯಲ್ಲಿ ೧೯೬೬ ರಲ್ಲಿ ನಡೆದ ೪೮ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಸಾಂಗ್ಲಿಯ

ವಿಲ್ಲಿಂಗ್ಡನ್ ಕಾಲೇಜಿನ ಪ್ರಾಂಶುಪಾಲರಾಗಿದ್ದು, ಅನಂತರ ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿದ್ದರು. ಇವರ ಕೃತಿಗಳು—ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಸಾಹಿತ್ಯದ ಇತಿಹಾಸ, ಸಾಹಿತ್ಯೋಪಾಸನೆ, ವಿಮರ್ಶೆಯ ವ್ರತ ಮುಂತಾದವು ಉನ್ನತ ಮಟ್ಟದವು. ನಾಟಕ, ಕಾದಂಬರಿ, ಕವನ ಸಂಕಲನ, ಮುಂತಾಗಿ ವೈವಿಧ್ಯವುಳ್ಳ ಸುಮಾರು ೪೦ ಕೃತಿಗಳನ್ನು ಬರೆದಿದ್ದಾರೆ. ಇವರು ಬಿ. ಎಂ. ಶ್ರೀ ಪ್ರತಿಷ್ಠಾನದ ಗೌರವ ಸದಸ್ಯರಾಗಿ, ಹಿತೈಷಿಗಳಾಗಿ ಪ್ರತಿಷ್ಠಾನದ ಬೆಳವಣಿಗೆಯನ್ನು ಸದಾ ಬಯಸುತ್ತಿದ್ದರು.

## ಸಿಂಪಿ ಲಿಂಗಣ್ಣ

ಇತ್ತೀಚೆಗೆ ಕೊಪ್ಪಳದಲ್ಲಿ ನಡೆದ ಅಖಿಲ ಭಾರತ ೬೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಹಿರಿಯ ಸಾಹಿತಿ ಸಿಂಪಿ ಲಿಂಗಣ್ಣ ೪-೫-೧೯೯೩ ರಂದು ಬೆಂಗಳೂರಿನ ಜಯದೇವ ಹೃದ್ರೋಗದ ಆಸ್ಪತ್ರೆಯಲ್ಲಿ ದಿವಂಗತರಾದರು. ಅವರಿಗೆ ೮೯ ವರ್ಷ ವಯಸ್ಸಾಗಿದ್ದಿತು. ಬಿಜಾಪುರ ಜಿಲ್ಲೆಯ ಚಡಚಣ ಎಂಬಲ್ಲಿ ೧೯೦೪ ರಲ್ಲಿ ಜನಿಸಿದ ಇವರು ಪ್ರಾಥಮಿಕ ಶಾಲಾ ಶಿಕ್ಷರಾಗಿದ್ದರು. ಮಹಾತ್ಮಾ ಗಾಂಧಿ, ಅರವಿಂದ—ಇವರಿಂದ ಪ್ರಭಾವಿತರಾಗಿ ಸ್ವಾತಂತ್ರ್ಯಕ್ಕಾಗಿ ಅಸ್ಪೃಶ್ಯತಾನಿವಾರಣೆಗಾಗಿ ಹೋರಾಡಿದವರು.

ಜಾನಪದ ಸಾಹಿತ್ಯ ಕೃಷಿಯನ್ನು ಚೆನ್ನಾಗಿ ಮಾಡಿದ ಇವರು 'ಹಲಸಂಗಿ ಗೆಳೆಯರ ಬಳಗ'ದವರು. 'ಗರತಿಯ ಹಾಡು', ಜೀವನ ಸಂಗೀತ'— ಕೃತಿಗಳ ಪ್ರಕಟನೆಗೆ ಕಾರಣರು. ಇವರು ಕಟ್ಟಿಬೆಳೆಸಿದ ಅರವಿಂದ ಗ್ರಂಥಮಾಲೆಯಲ್ಲಿ ಮೂವತ್ತು ವರ್ಷಗಳಲ್ಲಿ ೧೨೬ ಕೃತಿಗಳು ಹೊರಬಂದಿದೆ. ೧೯೬೦ರಲ್ಲಿ ಇವರಿಗೆ ಆದರ್ಶ ಶಿಕ್ಷಕ ರಾಷ್ಟ್ರ ಪ್ರಶಸ್ತಿ ಬಂದಿದೆ. ೧೯೬೭ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಗುಲ್ಬರ್ಗ ವಿಶ್ವವಿದ್ಯಾಲಯ ೧೯೮೯ರಲ್ಲಿ ಇವರಿಗೆ ಗೌ॥ ಡಾಕ್ಟರೇಟ್ ಪ್ರಶಸ್ತಿ ನೀಡಿದೆ. ಅನೇಕಕಡೆ ಜಾನಪದ ಗೋಷ್ಠಿಯ ಹಾಗೂ ಜಾನಪದ ಸಮ್ಮೇಳನಗಳ ಅಧ್ಯಕ್ಷತೆ ವಹಿಸಿದ್ದರು. ೧೯೯೦ರಲ್ಲಿ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದಿದ್ದ ಸಿಂಪಿ ಅವರು ಬಿ. ಎಂ. ಶ್ರೀ ಪ್ರತಿಷ್ಠಾನ ಮತ್ತು ಕನ್ನಡ ಸಾಹಿತ್ಯಪರಿಷತ್ತಿನ ಗೌರವ ಸದಸ್ಯರಾಗಿ ಗೌರವಾನ್ವಿತರಾಗಿದ್ದರು.

ಈ ಮೂವರು ಮಹನೀಯರಿಗೂ ಪ್ರತಿಷ್ಠಾನ ಸಂತಾಪವನ್ನು ವ್ಯಕ್ತಪಡಿಸುತ್ತದೆ.

---

# "ಸಮಸ್ಯಾಪೂರಣ"

ವಿದ್ವತ್ಪತ್ರಿಕೆಯಾಗಿರುವ 'ಕರ್ನಾಟಕ ಲೋಚನ' ದಲ್ಲಿ ವಿದ್ವತ್ಕವಿತಾರಚನೆಗೂ ಮಾನ್ಯತೆ ನೀಡುವುದಕ್ಕಾಗಿ ಪದ್ಯದ 'ಸಮಸ್ಯಾಪೂರಣ' ಎಂಬ ಅಂಕಣವನ್ನು ಈ ಸಂಚಿಕೆಯಿಂದ ಪ್ರಾಯೋಗಿಕವಾಗಿ ಪ್ರಾರಂಭಿಸಲಾಗಿದೆ. ಒಂದು ಸಂಚಿಕೆಗೆ ಒಂದು ಸಮಸ್ಯೆಯನ್ನು ಮಾತ್ರ ಸೂಚಿಸಲಾಗುವುದು. ಬಂದವುಗಳಲ್ಲಿ ಒಬ್ಬರ ಒಂದು ಪದ್ಯವನ್ನು ಮಾತ್ರ ಪ್ರಕಟಿಸಲಾಗುವುದು. ಈ ಬಗೆಯ ಅಂಕಣವನ್ನು ಪ್ರಕೃತ 'ಧ್ವನಿಯೆಂಬುದಳಂಕಾರಂ' ಎಂಬ ಕವಿರಾಜಮಾರ್ಗೋಕ್ತಿಯಿಂದ ಪ್ರಾರಂಭಿಸುವಂತೆ ಸೂಚಿಸಿದವರು ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯನವರು. ಈ ಅಂಕಣವು ಕನ್ನಡಕ್ಕೆ ಅತಿಶಯವೆನಿಸುವ ಛಂದೋಬದ್ಧ ಪದ್ಯರಚನೆಗೆ ಅನುವಿತ್ತಂತೆ ಆಗುವುದೆಂದು ಭಾವಿಸಲಾಗಿದೆ. ಅನೇಕ ವಿದ್ವಾಂಸರಿಗೆ ಈ ವಿಷಯವನ್ನು ತಿಳಿಸಿದ ಪ್ರಕಾರ ಬಂದ ಸಮಸ್ಯಾಪೂರ್ಣ ಪದ್ಯಗಳಲ್ಲಿ ಒಂದೊಂದನ್ನು ಈ ಅಂಕಣದಲ್ಲಿ ಕೊಡಲಾಗಿದೆ.

೧ ಧ್ವನಿಯೆಂಬುದಳಂಕಾರಂ
ಶ್ರೀ ವಿಜಯ ಧ್ವನಿಯು ಸಲ್ಲದೀ ನವಯುಗದೊಳ್
ಆವ ಕ್ಷೇತ್ರದೊಳಾದೊಡ
ಮುಗ್ರೋಚ್ಚಧ್ವನಿಯೆ ಸರ್ವವಿಜಯಿ ಮಹಾಸ್ತ್ರಂ ॥

— **ಗರ್ಗೇಶ್ವರಿ ವೆಂಕಟಸುಬ್ಬಯ್ಯ**

೨ ಧ್ವನಿಯೆಂಬುದಳಂಕಾರಂ
ನೆನೆಯುವುದಿದನೆಂದ ಬುಧನ ತೇಜದೊಳ್ ಧರೆಯೊಳ್
ವನಿತೆಯೆ ಒಡವೆಗೆ ಭೂಷಣ
ಮೆನೆ ವನಸಿಂಹನ್ಯಾಯಮುದವತರಿಸಿರ್ಕುಂ ॥

[ವನದಿಂದ ಸಿಂಹಕ್ಕೆ ರಕ್ಷಣೆ ; ಸಿಂಹದಿಂದ ವನಕ್ಕೆ ರಕ್ಷಣೆ ಈ ರೀತಿಯಲ್ಲಿ ವಾಚ್ಯಾಲಂಕಾರದಿಂದ ಧ್ವನಿಗಳ ಸೌಂದರ್ಯ. ಧ್ವನಿಯಿಂದ ವಾಚ್ಯಾರ್ಥಕ್ಕೆ ಸೌಂದರ್ಯ]

— **ಎಸ್. ರಂಗನಾಥ ಶರ್ಮಾ**

೩. ಧ್ವನಿಯೆಂಬುದಲಂ ಕಾರಂ
ಜಿ ನಗಲ್ಕುದ್ಯಾನದಲ್ಲಿ ಸುಮಸಂಗತಿಯಿಂ
ದನುಭವಿಸದೆ ದರ್ಶನ ಚಿ
ಧ್ಘನ ಸೌಂದರ್ಯಮನಿದೇಕೆ ನುಡಿವಯ್ ಧೀರಾ !

[ಇಲ್ಲಿ ಒಬ್ಬ ಪಂಡಿತನು ಸುಂದರವಾದ ತೋಟವೊಂದನ್ನು ವರ್ಣಿಸಲು ಹೊರಟಾಗ, ಸಹೃದಯನು ಆತನನ್ನು ನಿವಾರಿಸಿ — ಧ್ವನಿಯೆಂಬುದು (ಮಾತು) ಅಲಂ (ಸಾಕು). ಎದುರಿನಲ್ಲಿ ಕಾರಂಜಿ, ಹೂಗಳು ಎಲ್ಲ ಇರಲು ಆ ದರ್ಶನ (ನೋಟ) ವನ್ನು ಬಿಟ್ಟು ; ಅನುಭವಿಸಿ, ಆನಂದಿಸದೆ ಶುಷ್ಕವಾಗಿ ಏಕೆ ನುಡಿಯಿಂದ ಬಣ್ಣಿಸುತ್ತೀಯೆ ? ಎಂದು ಹೇಳಿದ ಉತ್ತರದ ಕಲ್ಪನೆಯುಂಟು. ತಾತ್ಪರ್ಯದಿಂದ ಪ್ರಕೃತಿ ಸೌಂದರ್ಯೋಪಾಸನಾವಧಿಯಲ್ಲಿ ಮಾತು ಕೀಳು ಎಂದೂ ಮೌನ ಮೇಲೆಂದೂ ಇದು ವಾಗತೀತ ರಮಣೀಯತೆಯೆಂದೂ ವಿವೃತ.]

— ರಾ. ಗಣೇಶ್

**ಮುಂದಿನ ಸಮಸ್ಯಾಪೂರ್ತಿ ವಿಷಯ :**

“ಕಸವರಮಂ ಕಳೆದು ಕಸವನಾಂತವೊಲಕ್ಕುಂ”

(ರಾಜಶೇಖರ ವಿಳಾಸದಿಂದ)

ಸೂಚಿಸಿದವರು : ವಿದ್ವಾನ್ ಎನ್. ರಂಗನಾಥಶರ್ಮಾ

ವಿ. ಸೂ. : ಮಾನ್ಯ ವಿದ್ವಾಂಸರು ಈ ಸಮಸ್ಯೆಯನ್ನು ಛಂದೋಬದ್ಧ ಕವಿತೆಗಳಲ್ಲಿ ಪೂರ್ತಿ ಮಾಡಿ ಕಳುಹಿಸಿದಲ್ಲಿ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. –ಸಂ

# ನಮ್ಮ ಲೇಖಕರು

1. **ಡಾ|| ಪಿ. ವಿ. ನಾರಾಯಣ**
ಕನ್ನಡ ವಿಭಾಗ, ವಿಜಯ ಕಾಲೇಜು
ಬೆಂಗಳೂರು-560 004

2. **ಡಾ|| ಎಚ್. ಎಸ್. ನಾಗಭೂಷಣ ಭಟ್ಟ**
ಸಂಸ್ಕೃತ ವಿಭಾಗದ ಮುಖ್ಯಸ್ಥರು
ಎ. ಪಿ. ಎಸ್. ಸಂಜೆ ಕಾಲೇಜು
ನರಸಿಂಹರಾಜ ಕಾಲೋನಿ
ಬೆಂಗಳೂರು-560 019

3. **ಡಾ|| ವಿ. ಜಿ. ಪೂಜಾರ**
ರೀಡರ್, ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗ ವಿಶ್ವವಿದ್ಯಾಲಯ
ಗುಲಬರ್ಗ-585106

4. **ಶ್ರೀ ಎಂ. ಗೋವಿಂದರಾಜು**
ನಂ. 38, 5ನೇ ಕ್ರಾಸ್
ಜಯಭಾರತ್ ನಗರ
ಬೆಂಗಳೂರು-560 033

೫. **ಶ್ರೀ ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್ಯ**
908-ಸಿ, 19ನೇ ಮುಖ್ಯ ರಸ್ತೆ
ಶ್ರೀ ರಾಜೇಶ್ವರಿನಗರ, ಬೆಂಗಳೂರು-560 039

6. **ಪಿ. ವಿ. ಜೋಶಿ**
663, 5ನೇ ಕ್ರಾಸ್
ಬನಶಂಕರಿ 1ನೇ ಸ್ಟೇಜ್, 2ನೇ ಫೇಸ್
ಬೆಂಗಳೂರು-560 050

7. **ಪ್ರೊ|| ಎಂ. ಜಿ. ವಾರಿ**
ಎಸ್. ವಿ. ಪಿ. ಪದವಿ ಕಾಲೇಜು
ಬಾದಾಮಿ-587 201

## ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

## ವಿನಿಮಯ ಪತ್ರಿಕೆಗಳು

1) ಪ್ರಬುದ್ಧ ಕರ್ನಾಟಕ, ಮಾನವಿಕ ಕರ್ನಾಟಕ, ವಿಜ್ಞಾನ ಕರ್ನಾಟಕ, ಮೈಸೂರು 2) ಸಾಧನೆ, ಬೆಂಗಳೂರು 3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು 4) ಕರ್ನಾಟಕ ಭಾರತಿ, ಧಾರವಾಡ 5) ಸುಗುಣಮಾಲಾ, ಉಡುಪಿ 6) ಶಂಕರ ಭಾಸ್ಕರ, ಬೆಂಗಳೂರು 7) ಧರ್ಮಪ್ರಭ, ಬೆಂಗಳೂರು 8) ಸತ್ಯಶುದ್ಧ ಕಾಯಕ, ಸಿರಿಗೆರೆ 9) ಅನ್ವೇಷಣೆ, ಬೆಂಗಳೂರು

## ಕರ್ನಾಟಕ ಲೋಚನ ಚಂದಾ ವಿವರ

ವಾರ್ಷಿಕ ಚಂದಾ : ವ್ಯಕ್ತಿಗಳಿಗೆ ರೂ. 15-00

ಗ್ರಂಥಾಲಯ, ಸಂಘ-ಸಂಸ್ಥೆಗಳಿಗೆ ರೂ. 25-00

ಆಜೀವ : ರೂ. 100-00

ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ

ಪ್ರತಿಷ್ಠಾನದ ಸದಸ್ಯತ್ವ : ವಾರ್ಷಿಕ : ರೂ. 25-00 ಆಜೀವ : ರೂ. 250-00

---

KARNATAKA LOCHANA Half yearly Journal, Published by B.M.Sri. Smaraka Prathishthana, 54, 3rd Cross, Gavipuram Extension, Bangalore - 560 019

Printed by : S. J. M. Mudrana (P) Ltd., S. R. Nagar, B'lore-27

## ಪ್ರತಿಷ್ಠಾನದ ಈಚಿನ ಪ್ರಕಟನೆಗಳು

| | | | |
|---|---|---|---|
| 1. | ಸಂಗಮರ ಕಾಲದ ವಿಜಯನಗರ | | 75.00 |
| 2. | ಕುಮಾರವ್ಯಾಸ ಭಾರತ ಸಂಗ್ರಹ | ಸಾದಾ ಪ್ರತಿ | 40.00 |
| | ,, | ಉತ್ತಮ ಪ್ರತಿ | 75.00 |
| 3. | ಕಾವ್ಯ ಇತಿಹಾಸ (ದತ್ತಿ ಉಪನ್ಯಾಸಗಳು) | | 10.00 |
| 4. | ಶಂಬಾ ಕೃತಿ ಸಮೀಕ್ಷೆ | | 35.00 |
| 5. | ಎಂ. ವಿ. ಸೀ. ಸಂಸ್ಮರಣೆ | | 25.00 |
| 6. | ವೈಚಾರಿಕ ಜಾಗೃತಿ | | 15.00 |
| 7. | ಹಸ್ತಪ್ರತಿಶಾಸ್ತ್ರ ಪರಿಚಯ | | 15.00 |
| 8. | ಸಂವಿಧಾನ ಮತ್ತು ಕಾನೂನು | | 20.00 |
| 9. | ಮಾಸ್ತಿ ಕಥಾ ಸಮೀಕ್ಷೆ | | 20.00 |

### ಸಿದ್ಧತೆಯಲ್ಲಿ

1. ಕದಂಬ (ಎಂ. ವಿ. ಸೀ. ಅವರ ಸಮಗ್ರ ಸಂಶೋಧನ ಲೇಖನಗಳ ಸಂಪುಟ.)
2. ತೌಲನಿಕ ಸಾಹಿತ್ಯ
3. ಸಾಹಿತ್ಯ ಮತ್ತು ಮನಶ್ಶಾಸ್ತ್ರ
4. ಶಾಸನ ಪಠ್ಯ
5. ದತ್ತಿ ಉಪನ್ಯಾಸಗಳು